ಕರ್ನಾಟಕ ಸ್ಕೌಟ್ ಮತ್ತು ಗೈಡ್
ತಿಂಗಳ ವಾರ್ತಾಪತ್ರಿಕೆ
150 YEARS OF CELEBRATING THE MAHATMA

# Karnataka Scout & Guide

Monthly News Magazine

Vol-16 Issue No. 11 November - 2019 ₹ 10/-




Sri Vajubai Vala, Hon'ble Governor of Karnataka & Patron of the Bharat Scouts & Guides released the 'Foundation Day Stamps' on 7th November 2019 at Rajbhavan & Blessed the Movement. Sri Kondajji B. Shanmukhappa, Sri N. Srinivasan Sri K.H. Jayaramaiah, Smt. C. Manjula, Rover & Ranger were present.



Bunnies of BBMP Nursery School Welcoming Hon'ble Justice Sri Abhay Shreeniwas Oka Chief Justice of High Court of Karnataka who Participated as Chief Guest in the Foundation Day Stamp Release Programme held on 7th November 2019 at 'Kondajji Basappa Auditorium' Palace Road, Bengaluru. Office Bearers of State Headquarters and BBMP District were Present.

## ನವೆಂಬರ್ 07ರಂದು ರಾಜ್ಯ ಸಂಸ್ಥೆ ಏರ್ಪಡಿಸಿದ್ದ 'ಧ್ವಜ ದಿನಾಚರಣೆ' ಪ್ರಯುಕ್ತ ಗಣ್ಯವ್ಯಕ್ತಿಗಳ ಮೂಲಕ ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಲಾಯಿತು.



ಮಾನ್ಯ ಉಪ ಮುಖ್ಯಮಂತ್ರಿಗಳಾದ ಡಾ. ಸಿ.ಎನ್. ಅಶ್ವತ್ಥ ನಾರಾಯಣ್ ರವರು ಧ್ವಜಚೀಟಿಗಳನ್ನು 'ಉನ್ನತ ಶಿಕ್ಷಣ ಮಂಡಳಿ ಭವನ'ದಲ್ಲಿ ಬಿಡುಗಡೆ ಮಾಡಿ ದೇಣಿಗೆಯನ್ನು ನೀಡುತ್ತಿರುವುದು. ಶ್ರೀ ಪ್ರೇಮ್ ಕುಮಾರ್ ಶ್ರೀ ಬಿ.ಕೆ. ಶೇಷಾದ್ರಿ ಮತ್ತು ರೋವರ್ಸ್-ರೇಂಜರ್ಸ್‌ಗಳು ಚಿತ್ರದಲ್ಲಿದ್ದಾರೆ.

ಮಾನ್ಯ ಪ್ರಾಥಮಿಕ ಹಾಗು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಎಸ್. ಸುರೇಶ್ ಕುಮಾರ್ ಅವರು 'ಸಚಿವರ ಕಛೇರಿ'ಯಲ್ಲಿ ಧ್ವಜಜೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು. ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ರೋವರ್ ಮತ್ತು ರೇಂಜರ್ ಚಿತ್ರದಲ್ಲಿದ್ದಾರೆ.







ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಟಿ.ಎಂ. ವಿಜಯ ಭಾಸ್ಕರ್ ಅವರು ತಮ್ಮ ಕಛೇರಿ'ಯಲ್ಲಿ ಧ್ವಜಜೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು.

ಪ್ರಾಥಮಿಕ ಹಾಗು ಪ್ರೌಢಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಎಸ್.ಆರ್. ಉಮಾಶಂಕರ್ ಅವರು 'ತಮ್ಮ ಕಛೇರಿ'ಯಲ್ಲಿ ಧ್ವಜಜೀಟಿಗಳನ್ನು ಬಿಡುಗಡೆ ಮಾಡಿದರು. ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ, ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀಮತಿ ಬಿ.ವಿ. ರಾಮಲತಾ, ಶ್ರೀ ಬಿ.ಕೆ. ಬಸವರಾಜ ಮತ್ತು ಸ್ಕೌಟ್-ಗೈಡ್ ಚಿತ್ರದಲ್ಲಿದ್ದಾರೆ.









ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

ಸಂಚಿಕೆಯ ವಾರ್ಷಿಕ ಚಂದಾ ರೂ. 100/-
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.


## ಪರಿವಿಡಿ


| | |
|---|---|
| ರಾಜ್ಯ ಮುಖ್ಯ ಆಯುಕ್ತರ ನುಡಿ | ...04 |
| ಶಿಕ್ಷಣ | ...07 |
| ನೋಡಲ್ ಅಧಿಕಾರಿಗಳ ಮಾಹಿತಿ ಶಿಬಿರ | ...08 |
| ರಾಜ್ಯ ಮಟ್ಟದ ಗೀತಗಾಯನ ಸ್ಪರ್ಧೆ | ...09 |
| ಪದಕ ಕಾರ್ಯಗಾರ, ನಕ್ಷೆ ತಯಾರಿಕೆ ಮತ್ತು ನಕ್ಷತ್ರ ವೀಕ್ಷಣೆ ಶಿಬಿರ | ...10 |
| ಜಾಂಬೂರೇಟ್ | ...12 |
| ಹಿಂದಿನ ಜಾಂಬೊರೇಟ್ ನಡೆದ ಸ್ಥಳಗಳು | ...14 |
| ಜಿಲ್ಲಾವಾರ್ತೆಗಳು | ...16 |
| ರಸಪ್ರಶ್ನೆ – 09 | ...41 |
| ಗಾಂಧಿ ಎಂದರೆ... | ...42 |
| ವಾಂತಿ | ...43 |
| ಮನೆಯಲ್ಲೊಂದು ಲೈಬ್ರರಿ ಇರಲಿ | ...44 |
| ಭಾರತೀಯ ಸಂಖ್ಯಾ ಪದ್ಧತಿ | ...46 |
| ಬರಲಿದೆ 'ಗ್ರಹಣ' ನೋಡಿದವನೇ ಜಾಣ | ...47 |



# ರಾಜ್ಯ ಮುಖ್ಯ ಆಯುಕ್ತರ ನುಡಿ

ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,
ಸಸ್ನೇಹ ನಮಸ್ಕಾರಗಳು

**ಧ್ಯೇಯ ವಾಕ್ಯ: "ಜಯ ಭಾರತ ಜನನಿಯ ತನುಜಾತೆ"**

ಡಿಸೆಂಬರ್ 27, 2019 ರಿಂದ ಜನವರಿ 2, 2020ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕದ 28ನೇ ಜಾಂಬೋರೇಟ್ ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ನಡೆಯಲಿದೆ. ಕರ್ನಾಟಕದ 35 ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಗಳಿಂದ ಸುಮಾರು 5000ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಹಾಗೂ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಲಿದ್ದಾರೆ.

2020ರ ಜನವರಿ 3 ರಿಂದ 7ನೆ ತಾರೀಖಿನವರೆಗೆ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ 42ನೆಯ ರಾಜ್ಯ ಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ ಉತ್ಸವವು ಜರುಗಲಿದೆ. 5 ರಿಂದ 10 ವರ್ಷದ ಮಕ್ಕಳು ಇದರಲ್ಲಿ ಭಾಗವಹಿಸುತ್ತಿದ್ದಾರೆ.





ಹೆಚ್ಚಿನ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲು ಉತ್ತೇಜನ ನೀಡುವಂತಹ ಹಲವು ಚಟುವಟಿಕೆಗಳು ಜಾಂಬೋರೇಟ್‌ನಲ್ಲಿ ನಡೆಯಲಿವೆ. ಕರಕುಶಲ ವಸ್ತುಗಳ ತಯಾರಿಕೆ, ವಿವಿಧ ಸಾಹಸ ಚಟುವಟಿಕೆಗಳು, ಹೊರಸಂಚಾರ, ಸಮುದಾಯ ಸೇವೆ (ಹಳ್ಳಿಗಳ ಸರ್ವೇಕ್ಷಣೆ), ಜಿಲ್ಲಾ ವಸ್ತು ಪ್ರದರ್ಶನ, ಮೋಜಿನ ದೇಶೀ ಆಟಗಳು, ಪಥಸಂಚಲನ, ಬ್ಯಾಂಡ್ ಪ್ರದರ್ಶನ, ಜಾನಪದ ನೃತ್ಯ, ಯೋಗ ಕಾರ್ಯಕ್ರಮ, ಸುಸ್ಥಿರ ಅಭಿವೃದ್ಧಿ ಕಾರ್ಯಕ್ರಮಗಳು (S.D.G.) ಬಗ್ಗೆ ಮಾಹಿತಿ ಕಾರ್ಯಾನುಷ್ಠಾನ, ಭವ್ಯ ಶಿಬಿರಾಗ್ನಿ, ಸಾಂಸ್ಕೃತಿಕ ಮೆರವಣಿಗೆ, ಫ್ರೀ ಬೀಯಿಂಗ್ ಮಿ, ಮೆಸೆಂಜರ್ ಆಫ್ ಪೀಸ್, ಮೈಂಡ್ ಸೆಟ್, ದಿನಕ್ಕೊಂದು ಒಳ್ಳೆಯ ಕೆಲಸ, ನೇತ್ರದಾನ ಜಾಗೃತಿ, ಹ್ಯಾಮ್ ಬಗ್ಗೆ, ಯುವ ವೇದಿಕೆ, ಜಾನಪದ ನೃತ್ಯ, 150ನೇ ಮಹಾತ್ಮಗಾಂಧಿ ಜಯಂತಿ ಕಾರ್ಯಕ್ರಮಗಳು ಮತ್ತು ವಸ್ತುಪ್ರದರ್ಶನ ಮುಂತಾದ ಹಲವಾರು ಕಾರ್ಯಕ್ರಮಗಳು ಇರುತ್ತವೆ. ನಿಮ್ಮ ಕೌಶಲ್ಯವನ್ನು ಪ್ರದರ್ಶಿಸುವ ಅವಕಾಶವಿರುತ್ತದೆ. ಸಹಜೀವನದ ಅನುಭವವಾಗುತ್ತದೆ. ಪರಸ್ಪರ ನೆರವು ನೀಡುವ ಮನೋಭಾವ ಬೆಳೆಯುತ್ತದೆ. ಈ ಚಟುವಟಿಕೆಗಳ ಮೂಲಕ ನಿಮ್ಮ ಸಮಗ್ರ ವ್ಯಕ್ತಿತ್ವ ವಿಕಸನವಾಗುತ್ತದೆ. ಕಬ್ಸ್ ಮತ್ತು ಬುಲ್‌ಬುಲ್ ಉತ್ಸವಕ್ಕೆ ಸೂಕ್ತವಾದಂತಹ ಕಾರ್ಯಕ್ರಮಗಳನ್ನು ಯೋಜಿಸಲಾಗುತ್ತಿದೆ. ರಾಜ್ಯ ಸಂಸ್ಥೆಯು ಈಗಾಗಲೇ ಜಾಂಬೋರೇಟ್ ಮತ್ತು ಕಬ್ ಮತ್ತು ಬುಲ್‌ಬುಲ್ ಉತ್ಸವದ ಯಶಸ್ವಿಗೆ ಅಗತ್ಯವಾದ ಕಾರ್ಯಕ್ರಮಗಳನ್ನು ನಿರ್ಧರಿಸುತ್ತಿದೆ. ಅದಕ್ಕೆ ಸಂಬಂಧಿಸಿದ ನಿರ್ದೇಶನಗಳನ್ನು ಈಗಾಗಲೇ ಜಿಲ್ಲಾ ಸಂಸ್ಥೆಗಳಿಗೆ ನೀಡಲಾಗಿದೆ. ಅದರಂತೆ, ಈ ಕಾರ್ಯಕ್ರಮಗಳ ಯಶಸ್ವಿಗೆ ತಮ್ಮ ಸಹಕಾರವನ್ನು ಕೋರುತ್ತೇನೆ.






ಮಹಾತ್ಮ ಗಾಂಧೀಜಿಯವರ 150ನೇ ಜಯಂತಿಯ ಸಂದರ್ಭದಲ್ಲಿ ಜಾಂಬೋರೇಟ್ ಮತ್ತು ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವ ನಡೆಯುತ್ತಿರುವುದು ಸಂತೋಷದ ವಿಷಯ. ದೇಶದ ಇಂದಿನ ಪರಿಸ್ಥಿತಿಯಲ್ಲಿ ಗಾಂಧೀಜಿಯವರ ಜೀವನ ಮತ್ತು ಚಿಂತನೆಗಳನ್ನು ಮತ್ತೆ ಅಳವಡಿಸಿಕೊಳ್ಳುವ ಅಗತ್ಯವಿದೆ. ಸತ್ಯ, ಅಹಿಂಸೆ, ಸರಳತೆ, ನಿಸ್ಪೃಹತೆ, ನಿರ್ಭೀತಿ, ಪ್ರಾಮಾಣಿಕತೆ ಮುಂತಾದ ಸದ್ಗುಣಗಳನ್ನು ವೈಯಕ್ತಿಕವಾಗಿಯೂ ದೇಶದ ಸ್ವಾತಂತ್ರ್ಯ ರಕ್ಷಣೆ, ಸಾಮಾಜಿಕ ಸಮಾನತೆ, ಜಾತಿ ಮತ, ಧರ್ಮಗಳನ್ನು



ಮೀರಿದ ಸಾಮಾಜಿಕ ವ್ಯಕ್ತಿತ್ವವನ್ನು ಗಾಂಧೀಜಿ ರೂಪಿಸಿಕೊಂಡಿದ್ದರು. ನುಡಿದಂತೆ ನಡೆದಿದ್ದರು. ಜಾಂಬೋರಿಯಲ್ಲಿ ಗಾಂಧೀಜಿ ಬದುಕಿನ ಚಿಂತನ-ಮಂಥನವಾಗಲಿದೆ. ಡಾ॥ ಗೊ.ರು. ಚನ್ನಬಸಪ್ಪ ರವರು ನವೆಂಬರ್ ತಿಂಗಳ ಮಾಸಪತ್ರಿಕೆಯಲ್ಲಿ ಈ ರೀತಿ ಬರೆದಿದ್ದಾರೆ. "ಗಾಂಧೀಜಿ ಅವರನ್ನು ಸ್ಮರಿಸಿಕೊಳ್ಳಬೇಕು. ಕೇವಲ ಸ್ಮರಣೆಯಲ್ಲ, ಅವರ ಆದರ್ಶ ನುಡಿ-ನಡೆಗಳನ್ನು ನಮ್ಮ ನುಡಿ-ನಡೆಗಳಲ್ಲಿ ತುಂಬಿಕೊಳ್ಳಬೇಕು. ಅಂತಾದರೆ ಮಾತ್ರ ಅವರ ಜಯಂತಿ ಆಚರಣೆ ಅರ್ಥಪೂರ್ಣವಾಗುತ್ತದೆ". ಹಿರಿಯರ ಈ ಮಾತುಗಳನ್ನು ಅರ್ಥಮಾಡಿಕೊಂಡು ಅದರಂತೆ ನಮ್ಮ ಕಾರ್ಯಚಟುವಟಿಕೆಗಳನ್ನು ರೂಪಿಸಿಕೊಳ್ಳಬೇಕು. 28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಹಾಗೂ 42ನೇ ಕಬ್ಸ್ ಮತ್ತು ಬುಲ್‌ಬುಲ್ ಉತ್ಸವದ ಯಶಸ್ಸು ಈ ದಿಸೆಯಲ್ಲಿದೆ ಎಂದು ನಾನು ಭಾವಿಸುತ್ತೇನೆ.

ಕರ್ನಾಟಕದ ಮೊದಲ ಜಾಂಬೋರೇಟ್ ನಡೆದಿದ್ದು ಚಿಕ್ಕಮಗಳೂರಿನಲ್ಲಿ. 1918ರ ಏಪ್ರಿಲ್ 27ರಿಂದ ಮೇ 6ರವರೆಗೆ. ಅಂದರೆ ಜಾಂಬೋರೇಟ್‌ಗೆ ಶತಮಾನದ ಇತಿಹಾಸವಿದೆ. ಅಲ್ಲಲ್ಲಿ ತಡವಾದರೂ ಜಾಂಬೋರೇಟ್ ಸತತವಾಗಿ ನಡೆದುಕೊಂಡು ಬರುತ್ತಿದೆ ಎಂಬುದು ಹೆಮ್ಮೆಯ ವಿಷಯ. ಈ ಸಾಧನೆಗೆ ಕಾರಣರಾದ ಎಲ್ಲಾ ಹಿರಿಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ನಾನು ಗೌರವಪೂರ್ವಕವಾಗಿ ಸ್ಮರಿಸುತ್ತೇನೆ. ಚಳವಳಿಯಲ್ಲಿ ಅವರುಗಳು ಇಟ್ಟಿದ್ದ ನಿಷ್ಠೆಯು ನಮಗೆ ಸ್ಫೂರ್ತಿಯನ್ನು ನೀಡುತ್ತಿದೆ ಎಂಬುದರಲ್ಲಿ ಅನುಮಾನವಿಲ್ಲ.

ನವೆಂಬರ್ 2 ಮತ್ತು 3ರಂದು ರಾಜ್ಯ ಮಟ್ಟದ ಗೀತಗಾಯನ ಸ್ಪರ್ಧೆ "ಹಾಡು ಹೊನಲು" ಮೈಸೂರಿನಲ್ಲಿ ನಡೆಯಿತು. ಉದ್ಘಾಟನಾ ಸಮಾರಂಭದಲ್ಲಿ, ನರಸಿಂಹರಾಜ ಕ್ಷೇತ್ರದ



ಮಾನ್ಯ ಶಾಸಕರಾದ ಶ್ರೀ ತನ್ವೀರ್ ಸೇಠ್ ಅವರು, ಮುಕ್ತಾಯ ಸಮಾರಂಭದಲ್ಲಿ ಸುತ್ತೂರು ಸಂಸ್ಥಾನದ ಶ್ರೀ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಭಾಗವಹಿಸಿ ಸ್ಪರ್ಧಿಗಳನ್ನು




ಉತ್ತೇಜಿಸಿದ್ದು ಹೆಮ್ಮೆಯ ಸಂಗತಿ. ವಿವಿಧ ಜಿಲ್ಲೆಗಳಲ್ಲಿ ನಡೆದ ಗೀತಗಾಯನ ಸ್ಪರ್ಧೆಗಳು ಗಾಯನದಲ್ಲಿ ಆಸಕ್ತಿ, ಪರಿಶ್ರಮವುಳ್ಳ ಮಕ್ಕಳಲ್ಲಿ ಹೆಚ್ಚಿನ ಹುಮ್ಮಸ್ಸು ತುಂಬಿದೆ. ಕಳೆದ 3 ವರ್ಷಗಳಿಂದ ನಡೆಯುತ್ತಿರುವ ಈ ಸ್ಪರ್ಧೆಗಳು ಹಲವಾರು ಗಾಯನ ಪ್ರತಿಭೆಗಳನ್ನು ಮುನ್ನೆಲೆಗೆ ತಂದಿದೆ ಎಂಬುದು ಸಂತೋಷದ ವಿಷಯ.




7 ನವೆಂಬರ್ 1950ರಲ್ಲಿ ದೇಶದಲ್ಲಿ ಕೆಲಸ ಮಾಡುತ್ತಿದ್ದ ವಿವಿಧ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳು ಸೇರಿ "ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ"ಯನ್ನು ಸ್ಥಾಪಿಸಿದರು. ಅಂದಿನಿಂದ ನವೆಂಬರ್ 7ನ್ನು "ಸ್ಥಾಪಕರದಿನ ಮತ್ತು ಧ್ವಜದಿನ"ವನ್ನಾಗಿ ಆಚರಿಸಲಾಗುತ್ತಿದೆ. ಸ್ಕೌಟ್ ಚಳವಳಿಯ ಸಾಧನೆಯನ್ನು ಮೆಚ್ಚುವ ಪ್ರತಿ ನಾಗರೀಕರು ಚಳವಳಿಯ ಬೆಳವಣಿಗೆಗೆ ತಮ್ಮ ಕೊಡುಗೆಯನ್ನು ನೀಡುತ್ತಾರೆ. ಬಹಳ ಸಂತೋಷದ ವಿಷಯವೆಂದರೆ ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಮುಖ್ಯರಾಗಿರುವ ಪ್ರತಿಯೊಬ್ಬರೂ ನಮ್ಮ ಚಳವಳಿಯನ್ನು ಹೃದಯಪೂರ್ವಕವಾಗಿ ಬೆಂಬಲಿಸುತ್ತಿದ್ದಾರೆ. ಧ್ವಜದ ಮಾರಾಟಕ್ಕಾಗಿ ಅವರುಗಳನ್ನು ಸಂಪರ್ಕಿಸಿದಾಗ ದೊರೆತ ಪ್ರೋತ್ಸಾಹವು ಸಂಸ್ಥೆಯಲ್ಲಿನ ನಮ್ಮ ನಂಬಿಕೆಯನ್ನು ಹೆಚ್ಚುಮಾಡುತ್ತದೆ.

ನಾಲ್ಕನೇ ವರ್ಷದ ಕರ್ನಾಟಕ ದರ್ಶನ ಕಾರ್ಯಕ್ರಮ (2019-20ನೇ ಸಾಲು) ಆರಂಭವಾಗಿದೆ. ಕಳೆದ ಮೂರು ವರ್ಷಗಳಲ್ಲಿ ಇಪ್ಪತ್ತೈದು ಸಾವಿರಕ್ಕೂ ಹೆಚ್ಚು ಮಕ್ಕಳು ಕರ್ನಾಟಕದ ಉದ್ದಗಲಕ್ಕೂ ಓಡಾಡಿದ್ದಾರೆ. ಸ್ಥಳೀಯ, ವೈಜ್ಞಾನಿಕ, ಧಾರ್ಮಿಕ, ಭೌಗೋಳಿಕ, ನೈಸರ್ಗಿಕ, ಐತಿಹಾಸಿಕ, ಕೈಗಾರಿಕೆಗಳು, ಉದ್ಯಾನವನಗಳನ್ನು ನೋಡಿ ಅರಿತುಕೊಂಡಿದ್ದಾರೆ. ಸಹಕಾರ, ಹೊಂದಾಣಿಕೆ, ನಾಯಕತ್ವ ಮನೋಭಾವಗಳು ಬೆಳೆದಿವೆ. ಸಾಮಾಜಿಕ ಸ್ಥಿತಿ-ಗತಿಯ ಅರಿವುಂಟಾಗಿದೆ. ಶಾಲಾ ಚಟುವಟಿಕೆಗಳನ್ನು ಹೊರ ಪ್ರಪಂಚದ ವಾಸ್ತವಗಳೊಂದಿಗೆ ಸಮನ್ವಯಗೊಳಿಸುವ ಶಕ್ತಿಯನ್ನು ಮಕ್ಕಳು ಪಡೆದಿದ್ದಾರೆ. ಪಠ್ಯೇತರ ಚಟುವಟಿಕೆಗಳಲ್ಲಿ ಉತ್ಸಾಹ, ಸ್ಪರ್ಧಾತ್ಮಕ ಮನೋಭಾವಗಳು, ಅವರಲ್ಲಿ ಕಾಣಬಹುದಾಗಿದೆ.

ಜಿಲ್ಲಾ ಸಂಸ್ಥೆಗಳಿಗೆ 2019-20ರ ಕರ್ನಾಟಕ ದರ್ಶನ ಕಾರ್ಯಕ್ರಮವನ್ನು ಯಶಸ್ವಿಯಾಗಿ ವ್ಯವಸ್ಥೆಗೊಳಿಸುವುದರ ಬಗ್ಗೆ ಈಗಾಗಲೇ ನಿರ್ದೇಶನವನ್ನು ನೀಡಲಾಗಿದೆ. ಸಮಯಾವಕಾಶವು



ಕಡಿಮೆ ಇರುವುದರಿಂದ ತಕ್ಷಣ ಜಿಲ್ಲಾ ಸಂಸ್ಥೆಗಳು ಕಾರ್ಯಪ್ರವೃತ್ತರಾಗಬೇಕೆಂದು ಕೋರುತ್ತೇನೆ.

ಮತ್ತೊಂದು ಮಹತ್ವದ ವಿಷಯವೆಂದರೆ, ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳ ದ್ವಿತೀಯ ವರ್ಷದ ಜಿಲ್ಲಾ ದರ್ಶನ ಕಾರ್ಯಕ್ರಮ. ಇದೇ ಮೊದಲ ಬಾರಿಗೆ ಈ ಅವಕಾಶವನ್ನು ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಲಾಗಿದೆ. ನವೆಂಬರ್ ಮತ್ತು ಡಿಸೆಂಬರ್ 2019ರ ಒಳಗೆ ಈ ಪ್ರವಾಸ ನಡೆಯಬೇಕಿದೆ. ಮಕ್ಕಳ ಸುರಕ್ಷತೆಗೆ ಗಮನ ಕೊಟ್ಟು, ಪ್ರವಾಸ ಕಾರ್ಯಕ್ರಮವನ್ನು ಯಶಸ್ವಿಮಾಡುವ ಜವಾಬ್ದಾರಿ ಜಿಲ್ಲಾ ಸಂಸ್ಥೆಗಳ ಮೇಲಿದೆ. ಎಲ್ಲಾ 35 ಜಿಲ್ಲಾ ಸಂಸ್ಥೆಗಳು ಈ ಕಾರ್ಯಕ್ರಮವನ್ನು ಗಂಭೀರವಾಗಿ ಪರಿಗಣಿಸಿ ಯಶಸ್ವಿಗೊಳಿಸಬೇಕೆಂದು ಪ್ರಾರ್ಥಿಸುತ್ತೇನೆ.



1949 ರಿಂದಲೂ ಪ್ರತೀವರ್ಷ ಡಿಸೆಂಬರ್ 7ನ್ನು "ಸಶಸ್ತ್ರ ಪಡೆಗಳ ಧ್ವಜ ದಿನ"ವನ್ನಾಗಿ ಆಚರಿಸಲಾಗುತ್ತಿದೆ. ನಮ್ಮ ಸಶಸ್ತ್ರ ಪಡೆಗಳಿಗೆ ಗೌರವವನ್ನು ಸಾರ್ವಜನಿಕರು ಸೂಚಿಸುವ ಕಾರ್ಯಕ್ರಮವಿದು. ದೇಶದ ಸೂಕ್ಷ್ಮವಾದ ಗಡಿಪ್ರದೇಶಗಳಲ್ಲಿ ಹಗಲಿರುಳೆನ್ನದೆ, ಚಳಿ-ಮಳೆಯೆನ್ನದೆ ಭಾರತದ ಸಾರ್ವಭೌಮತ್ವವನ್ನು ಕಾಪಾಡಲು ತಮ್ಮ ವೈಯಕ್ತಿಕ ಸುಖ-ಸಂತೋಷಗಳನ್ನು ಬದಿಗಿಟ್ಟು ಅಂತಿಮ ತ್ಯಾಗಕ್ಕೂ ಸಿದ್ಧರಾದ ನಮ್ಮ ವೀರ ಯೋಧರಿಗೆ ಸಲ್ಲಿಸುವ ಗೌರವವಿದು. ಧ್ವಜದಿನಾಚರಣೆಯ ಅಂಗವಾಗಿ ಸಂಗ್ರಹವಾಗುವ ಹಣವನ್ನು ಸಶಸ್ತ್ರ ಪಡೆಗಳ ಕ್ಷೇಮಾಭಿವೃದ್ಧಿಗೆ ಭಾರತ ಸರ್ಕಾರವು ಬಳಸಿಕೊಳ್ಳುತ್ತದೆ.



ಡಿಸೆಂಬರ್ 25 ರಿಂದ ಕ್ರಿಸ್‌ಮಸ್ ಹಬ್ಬವು ಆರಂಭವಾಗುತ್ತದೆ. ಜಗತ್ತಿಗೆ ಶಾಂತಿ ಮತ್ತು ಸೇವೆಯ ಮಹತ್ವವನ್ನು ತಿಳಿಸಿಕೊಟ್ಟ ಏಸುಕ್ರಿಸ್ತರ ಜನ್ಮದಿನವದು. ಎಲ್ಲರಿಗೂ ಕ್ರಿಸ್‌ಮಸ್ ಸಂಭ್ರಮಾಚರಣೆಯ ಶುಭಾಶಯಗಳು.

28ನೇ ಕರ್ನಾಟಕ ರಾಜ್ಯ ಜಾಂಬೋರೇಟ್ ನಡೆಯುವ ಸಂದರ್ಭದಲ್ಲಿಯೇ ಹೊಸವರ್ಷ 2020 ಉದಯವಾಗಲಿದೆ. 2019ರ ನಮ್ಮ ಸಾಧನೆಗಳನ್ನು ತೂಗಿನೋಡಿ 2020ರ ಗುರಿಗಳನ್ನು ಹಾಕಿಕೊಳ್ಳಬೇಕು. ಮುಂದಿನ ಸಂಚಿಕೆಯಲ್ಲಿ ಹೊಸವರ್ಷದ ಗುರಿಗಳ ಬಗ್ಗೆ ಇನ್ನಷ್ಟು ವಿಸ್ತಾರವಾಗಿ ಬರೆಯುತ್ತೇನೆ. ಹೊಸವರ್ಷ 2020 ನಿಮಗೆ, ನಿಮ್ಮ ಕುಟುಂಬದವರಿಗೆ, ಸಹವರ್ತಿಗಳಿಗೆ, ಗೆಳೆಯರಿಗೆ ಮತ್ತು ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಯಶಸ್ಸಿನ ವರ್ಷವಾಗಲೆಂದು ಹಾರೈಸುತ್ತೇನೆ

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

(ಪಿ.ಜಿ.ಆರ್. ಸಿಂಧ್ಯ)

ರಾಜ್ಯ ಮುಖ್ಯ ಆಯುಕ್ತರು

## ಬಂತು ಬಂತು ಬಂತು ಜಾಂಬೂರೀ



ಬಂತು ಬಂತು ಮತ್ತೆ ಬಂತು ಜಾಂಬೂರೀ
ಬನ್ನಿ ಬನ್ನಿ ಬಂದು ಸೇರಿ ನಲಿಯಿರಿ

ಸ್ಕೌಟ್ಸ್ ಅಂಡ್ ಗೈಡ್ಸ್‌ಗಳೇ ಆಡ ಬನ್ನಿರಿ
ಆಡಿ ಹಾಡಿ ಕಲಿತು ಬೆರೆತು ಕಲೆಯ ಬನ್ನಿರಿ
ಜಾತಿಮತ ಪಂಥಗಳ ತೊರೆದು ಬನ್ನಿರಿ
ಮೇಲು ಕೀಳು ಬಡವ ಧನಿಕ ಮರೆತು ಬನ್ನಿರಿ
ಬಂತು ಬಂತು

ಸಾಹಸವ ಮಾಡುತ್ತಾ ಧೈರ್ಯವಂತರಾಗ ಬನ್ನಿರಿ
ಸರಳ ಜೀವನ, ಸಹಬಾಳ್ವೆ ಕಲಿಯ ಬನ್ನಿರಿ
ಅಡಗಿರುವ ಪ್ರತಿಭೆಗಳ ಹೊರ ತರುವ ಬನ್ನಿರಿ
ಚಪ್ಪಾಳೆ ಪಡೆಯುತ್ತಾ ಸ್ಫೂರ್ತಿ ಪಡೆಯ ಬನ್ನಿರಿ
ಬಂತು ಬಂತು





# ಶಿಕ್ಷಣ

ಗೊ.ರು. ಚನ್ನಬಸಪ್ಪ
ಗೌರವ ಅಧ್ಯಕ್ಷರು
ಪ್ರಕಟಣಾ ಸಮಿತಿ, ಭಾ.ಸ್ಕೌ&ಗೈ, ಕರ್ನಾಟಕ

ಅಮೇರಿಕಾದ ಶಿಕ್ಷಣ ತಜ್ಞ ವಿಲಿಯಂ ಘಾನ್ಸ್ ಎಂಬಾತ ಅಲ್ಲಿನ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಹೇಳಿರುವ ಮಾತುಗಳು ಹೀಗಿವೆ :

'ನಮ್ಮ ಅಮೇರಿಕಾದಲ್ಲಿ ವಿಶ್ವದಲ್ಲೇ ಬೃಹತ್ತಾದ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಿದೆ. ಭಾರಿ ವೆಚ್ಚದ ಭವ್ಯ ಕಾಲೇಜು ಕಟ್ಟಡಗಳಿವೆ. ಅತ್ಯಂತ ವಿಸ್ತೃತವಾದ ಪಠ್ಯಕ್ರಮವಿದೆ. ಆದರೆ ಶಿಕ್ಷಣದ ಗುರಿಯ ಬಗ್ಗೆ ಅಮೇರಿಕಾ ಕುರುಡಾಗಿದೆ. ಇಂತಹ ಪರಿಸ್ಥಿತಿ ಬೇರೆಲ್ಲೂ ಇಲ್ಲ. ಶಿಕ್ಷಣದ ಪರಿಣಾಮದ ನಕಾರಾತ್ಮಕ ಲಕ್ಷಣ. ಅದು ತಪ್ಪುಗಳನ್ನು ಹತ್ತಿಕ್ಕಲು ಪ್ರಯತ್ನಿಸುವುದೇ ವಿನಃ ಹೊಸ ಮೌಲ್ಯಗಳನ್ನು ಹುಟ್ಟು ಹಾಕುತ್ತಿಲ್ಲ'.

ಈ ಮಾತುಗಳು ನಮ್ಮ ದೇಶದ ಶಿಕ್ಷಣ ನೀತಿ ನಿರೂಪಕರಿಗೆ ಎಚ್ಚರಿಕೆ ನೀಡಬೇಕು. ಆದರೆ ಪಾಶ್ಚಾತ್ಯ ರೀತಿ – ನೀತಿಗಳ ಅನುಕರಣೆಯೇ ಆದರ್ಶವೆಂದು ನಮ್ಮವರು ತಿಳಿದಿದ್ದಾರೆ. ಹಾಗಾಗಿ ನಮ್ಮ ಶಿಕ್ಷಣ ವ್ಯವಸ್ಥೆಯೇ ದಿಕ್ಕು ತಪ್ಪಿ ನಡೆದಿದೆ. ಶಿಕ್ಷಣವು ವ್ಯಕ್ತಿಯ ಮೌಲ್ಯವಿಕಾಸದ ಅಗತ್ಯವನ್ನು ಪೂರೈಸಬೆಕು. ನಮ್ಮ ನಾಡಿನ ಪರಮ ದಾರ್ಶನಿಕರಾಗಿದ್ದ ಧಾರವಾಡದ ತಪೋವನದ ಲಿಂ. ಕುಮಾರಸ್ವಾಮಿಗಳು, ಈ ವ್ಯಕ್ತಿಮೌಲ್ಯದ ಅಗತ್ಯ ಕುರಿತು ಮನಮುಟ್ಟುವ ಒಂದು ಮಾತು ಹೇಳಿದ್ದಾರೆ: 'ನಮ್ಮ ನಾಗರಿಕತೆ ಒಂದು ಹಂತವನ್ನು ಮುಟ್ಟಿದೆ ಎಂದು ಹೇಳಲು ನಾವೇನೂ ದೊಡ್ಡ ಇತಿಹಾಸವನ್ನು ಓದಬೇಕಾಗಿಲ್ಲ, ಅಥವಾ ದೊಡ್ಡ ಸಂಶೋಧನೆ ನಡೆಸಬೇಕಾಗಿಲ್ಲ. ಅತ್ಯಂತ ಸಂದಿಗ್ಧ ಸ್ಥಿತಿಗೆ ಮುಟ್ಟಿರುವುದೆಂದರೆ ವ್ಯಕ್ತಿಯ ನೈತಿಕ ಅವಸ್ಥೆ'. ಅವರ ಈ ಮಾತುಗಳಿಗೆ ನಾವು ಸಾಕ್ಷಿ ಹುಡುಕಬೇಕಾಗಿಲ್ಲ. ಇದಕ್ಕೆ ನಾವೇ ಸಾಕ್ಷಿಯಾಗಿದ್ದೇವೆ; ನಿದರ್ಶನವೂ ಆಗಿದ್ದೇವೆ.

ನಾವು ನಿಸರ್ಗದ ಮೇಲೆ ನಿಯಂತ್ರಣ ಪಡೆಯುವಷ್ಟು ಸಮರ್ಥರಾಗಿರುವುದು ನಿಜ. ಆದರೆ ನಮ್ಮ ಮೇಲೇ ನಮಗೆ ನಿಯಂತ್ರಣವಿಲ್ಲ. ಭೌತಿಕ ಬಲ ಗಳಿಸಿರುವ ನಾವು ನೈತಿಕ ಬಲವನ್ನೇ ಕಳೆದುಕೊಂಡಿದ್ದೇವೆ. ಪೂಜ್ಯ ಕುಮಾರಸ್ವಾಮಿಗಳೇ ಹೇಳುವಂತೆ 'MAN WITH VIRTUE IS THE BEST OF ALL ANIMALS AND THE MAN WITHOUT VIRTUE IS THE WORST OF ALL'. ವ್ಯಕ್ತಿಗೆ ಭೌತಿಕ ಅಗತ್ಯವಿದೆ ನಿಜ. ಆದರೆ ಅದೇ ಪರಮ ಗುರಿಯಲ್ಲ; ಆ ಅಗತ್ಯಕ್ಕಿಂತ ಮಿಗಿಲಾದ ಒಂದು ಗುರಿಯಿದೆ. ಅವನೂ ಒಂದು ಪ್ರಾಣಿಯಾದರೂ, ಅವನಲ್ಲಿ ಮೇಲ್ಮಟ್ಟದ ಒಂದು ಪ್ರಜ್ಞೆಯಿದೆ. ಅವನು ಆತ್ಮಪ್ರಜ್ಞಾ ಜೀವಿ. ವಿವೇಚನಾ ಪ್ರಜ್ಞಾಜೀವಿ. ಆದ್ದರಿಂದ ನೈತಿಕ ಜೀವನ ವ್ಯಕ್ತಿಯ ಆಯ್ಕೆಯಾಗಬೇಕು. ಇದಕ್ಕಾಗಿ ವ್ಯಕ್ತಿಗೆ ಮೌಲ್ಯಾಧಾರಿತ ಶಿಕ್ಷಣ ಬೇಕಾಗುತ್ತದೆ.

ದಿನದಿನಕ್ಕೆ ಮಾನವ ಜನಾಂಗದ ಬದುಕು ಕಲುಷಿತಗೊಳ್ಳುತ್ತಿದೆ. ಅದು ಅನುಭವಿಸುತ್ತಿರುವ, ಉಸಿರುಕಟ್ಟುವ ಇಂದಿನ ವಾತಾವರಣದ ಬಗ್ಗೆ ಉಪೇಕ್ಷೆ ಸಲ್ಲದು. ನಾವು ತೀವ್ರ ಗಮನಕೊಡಬೇಕಾದ ಕ್ಷೇತ್ರವೆಂದರೆ ಈ ವ್ಯಕ್ತಿಮೌಲ್ಯ ವಿಕಾಸ. ಇದಕ್ಕೆ ಸಮರ್ಥವಾದ ಶಿಕ್ಷಣದ ಶುದ್ಧ ಗಾಳಿಯ ಅಗತ್ಯವಿದೆ.

ವ್ಯಕ್ತಿಮೌಲ್ಯ ವಿಕಾಸದ ಶಿಕ್ಷಣಕ್ಕೆ ಅಗತ್ಯವಾದ ಪಠ್ಯಕ್ರಮವನ್ನು ನಾವು ಹೊರದೇಶಗಳಿಂದ ಆಮದು ಮಾಡಿಕೊಂಡರೆ ಆಗದು, ಬಹುಶಃ ವ್ಯಕ್ತಿನಿರ್ಮಾಣಕ್ಕೆ ಬೇಕಾದ ಸಾಹಿತ್ಯ – ಸಂಸ್ಕೃತಿಗಳ ಪರಂಪರೆಯ ಭಂಡಾರ ಭಾರತದಲ್ಲಿರುವಷ್ಟು ಬೇರೆಲ್ಲೂ ಇಲ್ಲ, ಆದರೆ, ನಾವು ಅದನ್ನು ಬಳಸಿಕೊಳ್ಳದೆ ಬಡವರಾಗಿದ್ದೇವೆ.

# ನೋಡಲ್ ಅಧಿಕಾರಿಗಳ ಮಾಹಿತಿ ಶಿಬಿರ

ಅಕ್ಟೋಬರ್ 17ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆ ಬೆಳಗಾವಿ, ಇವರುಗಳ ಆಶ್ರಯದಲ್ಲಿ ಮರಾಠಾ ಮಂಡಳ ಪ್ರೌಢಶಾಲೆ, ಬೆಳಗಾವಿಯಲ್ಲಿ ವಿಭಾಗೀಯ ಮಟ್ಟದ ಉಪನಿರ್ದೇಶಕರು (ಆಡಳಿತ), ಉಪನಿರ್ದೇಶಕರು (ಅಭಿವೃದ್ಧಿ), ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಜಿಲ್ಲಾ/ತಾಲ್ಲೂಕು ನೋಡಲ್ ಅಧಿಕಾರಿಗಳ ಮಾಹಿತಿ ಶಿಬಿರವು ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಇವರ ಉಪಸ್ಥಿತಿ ಹಾಗೂ ಮಾರ್ಗದರ್ಶನದಲ್ಲಿ ಜರುಗಿತು.

ಸದರಿ ಕಾರ್ಯಕ್ರಮವನ್ನು ರಾಜ್ಯ ಮುಖ್ಯ ಆಯುಕ್ತರು ಹಾಗೂ ಎಲ್ಲ ಅತಿಥಿಗಳು ಸಸಿಗೆ ನೀರು ಹಾಕುವುದರ ಮುಖಾಂತರ ಉದ್ಘಾಟಿಸಿದರು. ಶ್ರೀ ಪಿ.ಜಿ.ಆರ್. ಸಿಂಧ್ಯರವರು ಮಾತಾಡುತ್ತಾ ಸ್ಕೌಟ್ಸ್-ಗೈಡ್ಸ್ ಚಳವಳಿಯನ್ನು ಆಯಾ ಕ್ಷೇತ್ರಗಳಲ್ಲಿ ಅನುಷ್ಠಾನಗೊಳಿಸುವಲ್ಲಿ ಶಿಕ್ಷಣ ಇಲಾಖೆಯ ಎಲ್ಲ ಸಮಸ್ತ ಅಧಿಕಾರಿಗಳ ಪಾತ್ರ ಜವಾಬ್ದಾರಿಯುತವಾಗಿದೆ. ಅದನ್ನು ಯಶಸ್ವಿಯಾಗಿ ನಿರ್ವಹಿಸಲು ತಿಳಿಸಿದರು. ನಂತರ ಜಿಲ್ಲಾ ಪ್ರಗತಿಯ ಬಗ್ಗೆ ಉಪನಿರ್ದೇಶಕರು ಹಾಗೂ ಜಿಲ್ಲಾ ಮುಖ್ಯ ಆಯುಕ್ತರುಗಳಿಂದ ಅಭಿಪ್ರಾಯ ಸಂಗ್ರಹಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬೆಳಗಾವಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಗಜಾನನ ಮನ್ನಿಕೇರಿ ಇವರು ವಹಿಸಿದ್ದರು.

ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಕೆ.ಬಿ. ಬಸವರಾಜ ರಾಜ್ಯ ತರಬೇತಿ ಆಯುಕ್ತರಾದ ಶ್ರೀಮತಿ ಶ್ಯಾಮಲಾ ಕೆ.ವಿ. ಬೆಳಗಾವಿ ವಿಭಾಗೀಯ ಆಯುಕ್ತರು ಹಾಗೂ ಧಾರವಾಡ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, 5 ಜಿಲ್ಲೆಗಳಿಂದ 8 ಜನ ಉಪನಿರ್ದೇಶಕರುಗಳು, 29 ಜನ ಕ್ಷೇತ್ರ ಶಿಕ್ಷಣಾಧಿಕಾರಿಗಳು, 32 ಜನ ನೋಡಲ್ ಅಧಿಕಾರಿಗಳು, 27 ಜನ ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿಗಳು ಒಟ್ಟು 127 ಜನರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

* ಅಕ್ಟೋಬರ್ 10 ರಂದು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ ವಿಭಾಗೀಯ ಮಟ್ಟದ ಉಪನಿರ್ದೇಶಕರು (ಆಡಳಿತ), ಉಪನಿರ್ದೇಶಕರು (ಅಭಿವೃದ್ಧಿ), ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ನೋಡಲ್ ಅಧಿಕಾರಿಗಳ, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಮಾಹಿತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮವು ಸಾಮೂಹಿಕ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ರವರು ಸ್ವಾಗತವನ್ನು ಕೋರಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪ ಗೌಡ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ, ಉಪನಿರ್ದೇಶಕರು ಪ್ರಾಂಶುಪಾಲರು (ಅಭಿವೃದ್ಧಿ) ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀಮತಿ ಸುಮಂಗಳ ಪಿ. ಕುಚಿನಾಡ್, ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಮಂಜುನಾಥ್ ರಾಜ್, ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀ ಬಸವರಾಜ್‌ರವರು ಗಿಡಕ್ಕೆ ನೀರು ಹಾಕುವ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ಈ ಶಿಬಿರಕ್ಕೆ ಏಳು ಜಿಲ್ಲೆಗಳ 121 ಉಪನಿರ್ದೇಶಕರು(ಆಡಳಿತ) ಮತ್ತು (ಅಭಿವೃದ್ಧಿ) ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ನೋಡಲ್ ಅಧಿಕಾರಿಗಳು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಉಪಸ್ಥಿತರಿದ್ದರು.







## ರಾಜ್ಯ ಮಟ್ಟದ

# ಗೀತಗಾಯನ ಸ್ಪರ್ಧೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ಮತ್ತು ಮೈಸೂರು ಜಿಲ್ಲಾ ಸಂಸ್ಥೆ ಸಹಯೋಗದೊಂದಿಗೆ ರಾಜ್ಯ ಮಟ್ಟದ ಗೀತಗಾಯನ ಸ್ಪರ್ಧೆಯನ್ನು ದಿನಾಂಕ 2 ರಿಂದ 3 ನವೆಂಬರ್ 2019ರವರೆಗೆ ವಿದ್ಯಾವರ್ಧಕ ಎಂಜನಿಯರಿಂಗ್ ಕಾಲೇಜು, ಗೋಕುಲಂ, ಮೈಸೂರು ಇಲ್ಲಿ ಏರ್ಪಡಿಸಲಾಗಿತ್ತು.

ಸದರಿ ಶಿಬಿರದಲ್ಲಿ ವಿಶೇಷವಾಗಿ ಕಬ್ಸ್, ಬುಲ್-ಬುಲ್ಸ್‌ಗಳಿಗೆ ವೈಯಕ್ತಿಕ ಹಾಡು ಹಾಡುವುದು, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದೇಶಭಕ್ತಿ ಗೀತೆಗಳು, ರೋವರ್ಸ್ ರೇಂಜರ್ಸ್‌ಗಳಿಗೆ ವಾದ್ಯಗಳನ್ನು ನುಡಿಸುವ ಸ್ಪರ್ಧೆಯಲ್ಲಿ ಜಿಲ್ಲಾ ಮಟ್ಟದ ಪ್ರಥಮ ಬಹುಮಾನ ಪಡೆದ ಮಕ್ಕಳು ರಾಜ್ಯ ಮಟ್ಟದ ಗೀತಗಾಯನ ಸ್ಪರ್ಧೆಗೆ ಅರ್ಹರಾಗಿದ್ದರು. ಒಟ್ಟು 33 ಜಿಲ್ಲೆಗಳಿಂದ 22 ಕಬ್ಸ್, 22 ಬುಲ್-ಬುಲ್ಸ್, 206 ಸ್ಕೌಟ್ಸ್, 263 ಗೈಡ್ಸ್, 3 ರೋವರ್ಸ್, 3 ರೇಂಜರ್ಸ್, 76 ಘಟಕದ ನಾಯಕರು, 24 ಇತರೆ ಶಿಕ್ಷಕರು ಹಲವು ಪೋಷಕರು 630 ಮಕ್ಕಳು ಮತ್ತು ಶಿಕ್ಷಕರು ಭಾಗವಹಿಸಿದ್ದರು.

ನವೆಂಬರ್ 02 ರಂದು ಉದ್ಘಾಟನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀಮತಿ ಪುಷ್ಪಲತಾ, ಪೂಜ್ಯ ಮಹಾಪೌರರು, ಮಹಾನಗರ ಪಾಲಿಕೆ, ಮೈಸೂರು ಇವರು ಉದ್ಘಾಟನೆ ನೆರವೇರಿಸಿದರು. ಶ್ರೀ ತನ್ವೀರ್ ಸೇಠ್, ಶಾಸಕರು ನರಸಿಂಹರಾಜ ಕ್ಷೇತ್ರ, ಮೈಸೂರು, ಡಾ॥ ಎಂ.ಜಿ.ಆರ್. ಅರಸ್, ಅಧ್ಯಕ್ಷರು, ಚುಟುಕು ಸಾಹಿತ್ಯ ಪರಿಷತ್ ಕೇಂದ್ರ ಸಮಿತಿ ಭಾಗವಹಿಸಿ ಮಕ್ಕಳನ್ನು ಪ್ರೋತ್ಸಾಹಿಸಿ ಹಿತನುಡಿ ನೀಡಿದರು.




ಶ್ರೀಮತಿ ಗೀತ ನಟರಾಜ, ರಾಜ್ಯ ಆಯುಕ್ತರು (ಗೈ) ಪ್ರಾಸ್ತಾವಿಕ ನುಡಿ ನುಡಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಪಿ. ವಿಶ್ವನಾಥ್ ಜಿಲ್ಲಾ ಮುಖ್ಯ ಆಯುಕ್ತರು ಸರ್ವರನ್ನು ಸ್ವಾಗತಿಸಿದರೆ ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿಗಳು ಸರ್ವರಿಗೆ ವಂದನೆ ಸಲ್ಲಿಸಿದರು.

ನಂತರ ಡಾ॥ ಹೇಮ ಪ್ರಸಾದ ಇವರ ನಾಯಕತ್ವದಲ್ಲಿ ವಿದುಷಿ ಇಂದ್ರಾಣಿ ಅನಂತ್‌ರಾಮ್, ವಿದ್ವಾನ್ ಎ. ಎಸ್. ಆನಂತರಾಮ್, ವಿದುಷಿ ರೋಹಿಣಿ ಸುಧಾಮ್, ವಿದ್ವಾನ್ ಇಂದುಶೇಖ್, ವಿದ್ವಾನ್ ಪುರುಷೋತ್ತಮ್ ಇವರುಗಳು ಗೀತಗಾಯನ ಸ್ಪರ್ಧೆಯ ತೀರ್ಪುಗಾರರಾಗಿ ಆಗಮಿಸಿದ್ದರು. ರಾಜ್ಯ ಮಟ್ಟದಲ್ಲಿ ಪ್ರಥಮ ಪ್ರಶಸ್ತಿಗೆ ರೂ. 1000, ದ್ವಿತೀಯ ಪ್ರಶಸ್ತಿಗೆ ರೂ. 800, ತೃತೀಯ ಪ್ರಶಸ್ತಿಗೆ ರೂ. 500 ವಿಭಾಗೀಯ ಮಟ್ಟದಲ್ಲಿ ಎಲ್ಲಾ ವಿಭಾಗಕ್ಕೆ ಪ್ರಥಮ ರೂ. 300, ದ್ವಿತೀಯ ರೂ. 200, ತೃತೀಯ ರೂ. 100 ನಗದು ಬಹುಮಾನವನ್ನು ನೀಡಲಾಯಿತು.






ನವೆಂಬರ್ 03 ರಂದು ಸಂಜೆ 4 ಗಂಟೆಗೆ ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀಶ್ರೀಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು ಸುತ್ತೂರು ಮಹಾಸಂಸ್ಥಾನ ಮೈಸೂರು ಇವರು ಎಲ್ಲಾ ವಿಜೇತರಿಗೆ ನಗದು ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನು ವಿತರಿಸಿ ಆಶೀರ್ವಚನ ನೀಡಿ ಮಕ್ಕಳಿಗೆ ಮಾರ್ಗದರ್ಶನ ನೀಡಿದರು. ಶ್ರೀ ಎಲ್. ನಾಗೇಂದ್ರ ಮಾನ್ಯ ಶಾಸಕರು, ಚಾಮರಾಜಕ್ಷೇತ್ರ, ಮೈಸೂರು ಇವರು ಮುಖ್ಯ ಅತಿಥಿಯಾಗಿ ಆಗಮಿಸಿ ಸಮಾಜಕ್ಕೆ ಸ್ಕೌಟ್ಸ್, ಗೈಡ್ಸ್‌ಗಳ ಅಗತ್ಯತೆಯ ಬಗ್ಗೆ ಹಿತನುಡಿದರು.

ಶ್ರೀ ಗುಂಡಪ್ಪಗೌಡರು, ಅಧ್ಯಕ್ಷರು, ವಿದ್ಯಾವರ್ಧಕ ಸಂಘ, ಮೈಸೂರು ಇವರು ಹಿತವಚನ ನೀಡಿ ಪ್ರೋತ್ಸಾಹಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಇವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದು, ಪ್ರತಿಜಿಲ್ಲೆಯ ಮಕ್ಕಳು ಮತ್ತು ಶಿಕ್ಷಕರೊಂದಿಗೆ ಮಾತನಾಡಿ ಕಾರ್ಯಕ್ರಮದ ಬಗ್ಗೆ ಚರ್ಚಿಸಿದರು. ಶ್ರೀ ಪಿ. ವಿಶ್ವನಾಥ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಅವರ ತಂಡದ ಎಲ್ಲಾ ಜಿಲ್ಲಾ ಪದಾಧಿಕಾರಿಗಳು ಎಲ್ಲಾ ವ್ಯವಸ್ಥೆಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು.







## ರಾಜ್ಯ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪದಕ ಕಾರ್ಯಗಾರ ಹಾಗೂ ರೋವರ್ಸ್- ರೇಂಜರ್ಸ್‌ಗಳ ನಕ್ಷೆ ತಯಾರಿಕೆ ಮತ್ತು ನಕ್ಷತ್ರ ವೀಕ್ಷಣೆ ಶಿಬಿರ

ಮೇಲ್ಕಂಡ ಎರಡೂ ಶಿಬಿರಗಳನ್ನು ನವೆಂಬರ್ 11 ರಿಂದ 15ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ಶಿಬಿರ ಮತ್ತು ತರಬೇತಿ ಕೇಂದ್ರ ಕೊಂಡಜ್ಜಿ ಇಲ್ಲಿ ಹಮ್ಮಿಕೊಳ್ಳಲಾಗಿತ್ತು.

ನವೆಂಬರ್ 12ರಂದು ಸದರಿ ಶಿಬಿರಗಳ ಉದ್ಘಾಟನೆಯನ್ನು ಶ್ರೀಮತಿ ವಿಶಾಲಮ್ಮ ನಾರಪ್ಪ, ಅಧ್ಯಕ್ಷರು, ಗ್ರಾಮ ಪಂಚಾಯಿತಿ, ಕೊಂಡಜ್ಜಿ ಮತ್ತು ಶ್ರೀ ನಿಖಿಲ್ ಕೊಂಡಜ್ಜಿ, ಯುವ ನಾಯಕರು ನೆರವೇರಿಸಿದರು.

ಪದಕ ಕಾರ್ಯಗಾರ ಶಿಬಿರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪ್ರಾವಿಣ್ಯತಾ ಪದಕಗಳು, ಲಾಗ್ ಪುಸ್ತಕ ಬರೆಯುವ ವಿಧಾನ, ಮುಂತಾದ ವಿಷಯಗಳನ್ನು ತಿಳಿಸಲಾಯಿತು.

ಶ್ರೀ ಎಸ್.ಎನ್. ಕಿರಣ್ ಕುಮಾರ್, ಪೋಲೀಸ್ ನೀರಿಕ್ಷಕರು ಇವರ ನೇತೃತ್ವದಲ್ಲಿ ವಿಪತ್ತು ನಿರ್ವಹಣೆ, ಪೋಲೀಸ್ ಶ್ವಾನ ದಳದ ಸಾಮರ್ಥ್ಯ ಮುಂತಾದವುಗಳ ಬಗ್ಗೆ ಪ್ರಾತ್ಯಾಕ್ಷಿಕೆ ಮೂಲಕ ಮಾಹಿತಿ ನೀಡಲಾಯಿತು.

ಶ್ರೀ ಶಶಿಕುಮಾರ್, ಶ್ರೀ ಸುಂದರೇಶ್, ಗೋಲ್ಡನ್ ಅವರ್ ಇವರು ಪ್ರಥಮ ಚಿಕಿತ್ಸೆ ಹಾಗೂ ತುರ್ತು ಪರಿಸ್ಥಿತಿಯಲ್ಲಿ ಬದುಕಿಸುವುದು ಹೇಗೆ ಎಂಬ ವಿಷಯವನ್ನು ತಿಳಿಸಿಕೊಟ್ಟರು. ಶ್ರೀಅನ್ವೇಕರ್, ನಿವೃತ್ತ ಅಧಿಕಾರಿಗಳು, ಹೋಮ್ ಗಾರ್ಡ್, ನಾಗರೀಕ ಸೇವೆ ಪ್ರಾವಿಣ್ಯತಾ ಪದಕದ ಬಗ್ಗೆ ವಿವರವಾಗಿ ತಿಳಿಸಿಕೊಟ್ಟರು. ಶ್ರೀ ಸಂದೀಪ ಬಸರತ್, ಕರ್ನಾಟಕ ರಾಜ್ಯ ಅಗ್ನಿಶಾಮಕ ದಳದ ಅಧಿಕಾರಿ ಮತ್ತು ಅವರ ತಂಡ ವಿವಿಧ ಬೆಂಕಿ ಅಪಘಾತಗಳನ್ನು ಆರಿಸುವ ವ್ಯವಸ್ಥೆ, ನೀರಿನ ಸಿಂಪಡಿಸುವಿಕೆಯ ಪ್ರಾತ್ಯಕ್ಷಿಕೆಯನ್ನು ತೋರಿಸಿದರು.



ಸೌಂದರ್ಯ ವರ್ಧಕ (Beautician) ತರಬೇತಿಯನ್ನು ಪರಿಣಿತರಿಂದ ಪ್ರಾತ್ಯಕ್ಷಿಕೆ ಮೂಲಕ ನೀಡಲಾಯಿತು. ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಬಾಬುರಾವ್ ನಿಂಬೂರಿ, ಎಲ್.ಟಿ(ಸ್ಕೌ) ಮತ್ತು ಗೈಡ್ ವಿಭಾಗದ ನಾಯಕಿಯಾಗಿ ಸೋದರಿ ಸಿಂಥಿಯಾ ಕಾರ್ಯನಿರ್ವಹಿಸಿದರು. ಈ ಶಿಬಿರದಲ್ಲಿ 125 ಸ್ಕೌಟ್ಸ್‌ಗಳು, 73 ಗೈಡ್ಸ್‌ಗಳು, 13 ಸ್ಕೌಟ್ ಶಿಕ್ಷಕರು ಮತ್ತು 8 ಗೈಡ್ ಶಿಕ್ಷಕಿಯರು ಭಾಗವಹಸಿದ್ದರು.




ಸಮಾರಂಭದಲ್ಲಿ ಮುಖ್ಯತಿಥಿಗಳಾಗಿ ಭಾಗವಹಿಸಿದ ಮಾನ್ಯ ಶಾಸಕರಾದ ಶ್ರೀ ಎಸ್. ರಾಮಪ್ಪ, ವಿಧಾನ ಪರಿಷತ್ ಸದಸ್ಯರಾದ ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ತಾಲ್ಲೂಕು ಪಂಚಾಯತ್ ಅಧ್ಯಕ್ಷಿಣೆ ಶ್ರೀಮತಿ ಶ್ರೀದೇವಿ ಮಂಜಪ್ಪ, ಶ್ರೀ ಬೆಳ್ಳೂಡಿ ಬಸವರಾಜ್ ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಗ್ರಾಮದ ಮುಖಂಡರುಗಳು ಹಾಗು ರಾಜ್ಯ ಸಂಸ್ಥೆ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

ರೋವರ್ಸ್ ಮತ್ತು ರೇಂಜರ್‌ಗಳಿಗಾಗಿ ಹಮ್ಮಿಕೊಂಡಿದ್ದ ಶಿಬಿರದಲ್ಲಿ ನಕ್ಷೆ ತಯಾರಿಕೆ ಬಗ್ಗೆ ವಿವರಣೆ ಹಾಗು ಪ್ರಾಯೋಗಿಕ ತರಬೇತಿ ನೀಡಲಾಯಿತು. ರಾತ್ರಿ ವೇಳೆಯಲ್ಲಿ ನಕ್ಷತ್ರ ವೀಕ್ಷಣೆಯ ಬಗ್ಗೆ ತರಬೇತಿ ನೀಡಲಾಯಿತು. ಶ್ರೀ ಕೆ.ಜಿ. ಗೋಪಾಲ ಕೃಷ್ಣ, ಎಲ್.ಟಿ(ಸ್ಕೌ) ಶಿಬಿರದ ನಾಯಕರಾಗಿದ್ದರು. ಈ ಶಿಬಿರದಲ್ಲಿ 35 ರೋವರ್ಸ್‌ಗಳು ಮತ್ತು 15 ರೇಂಜರ್ಸ್‌ಗಳು ಭಾಗವಹಿಸಿದ್ದರು.

ನವೆಂಬರ್ 14ರಂದು ದಿ. ಕೊಂಡಜ್ಜಿ ಬಸಪ್ಪನವರ 37ನೇ ಪುಣ್ಯ ಸ್ಮರಣೆ ಅಂಗವಾಗಿ ಹಮ್ಮಿಕೊಂಡಿದ್ದ ಸರ್ವಧರ್ಮ ಪ್ರಾರ್ಥನೆ ಹಾಗೂ ಶಿಬಿರಗಳ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಲು ಶ್ರೀ ಎಸ್.ರಾಮಪ್ಪ, ಮಾನ್ಯ ವಿಧಾನ ಸಭೆ ಸದಸ್ಯರು. ಹರಿಹರ ಕ್ಷೇತ್ರ ಇವರು ಆಗಮಿಸಿದ್ದರು. ಈ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪನವರ ವಿಚಾರಧಾರೆಗಳನ್ನು ಸ್ಮರಿಸಿ ಶಿಬಿರದ ಅಭಿವೃದ್ಧಿಗೆ ತನ್ನ ವ್ಯಾಪ್ತಿಯ ಸಹಕಾರ ನೀಡುವುದಾಗಿ ತಿಳಿಸಿದರು. ಶ್ರೀಮತಿ ಶ್ರೀದೇವಿ ಮಂಜಪ್ಪ, ಅಧ್ಯಕ್ಷರು, ಹರಿಹರ ತಾಲ್ಲೂಕು ಪಂಚಾಯತ್ ಶಿಬಿರಾರ್ಥಿಗಳಿಗೆ ಶುಭ ಹಾರೈಸಿದರು. ಶ್ರೀಮತಿ ಅರ್ಚನ ಬಸವರಾಜ, ಜಿಲ್ಲಾ ಪಂಚಾಯತ್ ಸದಸ್ಯರು, ಕೊಂಡಜ್ಜಿ ಮತ್ತು ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ವಿಧಾನ ಪರಿಷತ್ ಸದಸ್ಯರು ಹಾಗೂ ಸಹಾಯಕ ರಾಜ್ಯ ಆಯುಕ್ತರು(ಸ್ಕೌ) ಕರ್ನಾಟಕ ಇವರು ಉಪಸ್ಥಿತರಿದ್ದರು. ಶ್ರೀ ಎನ್.ಶ್ರೀನಿವಾಸನ್, ಪ್ರಭಾರಿ ರಾಜ್ಯ ಆಯುಕ್ತರು(ಸ್ಕೌ) ಆಗಮಿಸಿ ನಕ್ಷೆ ತಯಾರಿಕೆ ತರಬೇತಿಯನ್ನು ನೀಡಿ ಸಮಾರಂಭದಲ್ಲಿ ಭಾಗವಹಿಸಿದ್ದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ದಿ.ಕೊಂಡಜ್ಜಿ ಬಸಪ್ಪನವರು ಸಲ್ಲಿಸಿದ ಸೇವೆ, ಅವರ ವಿಚಾರಗಳು, ತರಬೇತಿ ಕೇಂದ್ರದ ಅಭಿವೃದ್ಧಿ, ಮಕ್ಕಳ ಬೆಳವಣಿಗೆ ಮುಂತಾದ ವಿಷಯಗಳ ಬಗ್ಗೆ ಮಾತನಾಡಿ, ಮಾನ್ಯ ಶಾಸಕರ ಅನುದಾನದಿಂದ ತರಬೇತಿ ಕೇಂದ್ರದ ಅಭಿವೃದ್ಧಿ ಕಾರ್ಯಗಳಿಗೆ ನೆರವನ್ನು ಕೋರಿದರು.



# ಜಾಂಬೋರೇಟ್

ಮಂಜುಳಾ. ಸಿ
ರಾಜ್ಯ ಸಂಘಟನಾ ಆಯುಕ್ತರು (ಗೈ)

ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ರಾಜ್ಯ ಮಟ್ಟದ ದೊಡ್ಡ ಮೇಳವೇ ಜಾಂಬೋರೇಟ್. ಜಾಂಬೋರೇಟ್ ಎನ್ನುವ ಪದ ಮಕ್ಕಳಲ್ಲಿ ಉತ್ಸಾಹ, ಸ್ನೇಹ, ಭ್ರಾತೃತ್ವ, ಶಿಸ್ತು, ಸೌಹರ್ದತೆ, ದೇಶಭಕ್ತಿ, ನಾಯಕತ್ವ, ಸಹ ಜೀವನ, ಸಹ ಭೋಜನ ಸಹ ಬಾಳ್ವೆ ಮತ್ತು ಪ್ರತಿಭೆಗಳನ್ನು ಹೊರ ಹೊಮ್ಮಿಸಿ ಜೀವನ ಶಿಕ್ಷಣ ಮತ್ತು ಬದುಕುವ ಕಲೆಯನ್ನು ಕೌಶಲ್ಯಗಳನ್ನು ಕಲಿಸುವ ಒಂದು ಬೃಹತ್ ವೇದಿಕೆ ಎಂದರೆ ತಪ್ಪಾಗಲಾರದು.

ಆಟಗಳ ಮೂಲಕ ಪಾಠ, ಹೊರಾಂಗಣ ಶಿಕ್ಷಣದಿಂದ ಸಮುದಾಯದ ಅರಿವು, ಸೇವೆಗಳಿಂದ ನೈಜತೆಯ ಅರ್ಥ ವಿವಿಧ ಊರುಗಳಿಂದ ಬಂದಿರುವ ಸಮಾನ ವಯಸ್ಸಿನವರೊಂದಿಗೆ ಜಾತಿ, ಮತ, ಕೋಮುಗಳ ಬಾಲಕ ಬಾಲಕಿಯರು ಒಂದು ಕಡೆ ಕುಳಿತು ತಮ್ಮ ತಮ್ಮ ಸಂಕುಚಿತ ಭಾವನೆಗಳನ್ನು ಬಿಟ್ಟು ಸರ್ವಧರ್ಮ ಸಮನ್ವತೆಯನ್ನು ಸಾರುವ ಸಂದೇಶವನ್ನು ಜಾಂಬೋರೇಟ್‌ನಲ್ಲಿ ಮಕ್ಕಳು ಆನಂದಮಯ ಸಹಬಾಳ್ವೆಯನ್ನು ಜಾಂಬೋರೇಟ್ ಕಲಿಸುತ್ತದೆ.

ಪ್ರಾತಃಕಾಲದ ವ್ಯಾಯಾಮದಿಂದ ಪ್ರಾರಂಭಿಸಿ ರಾತ್ರಿ ಮಲಗುವವರೆಗೂ ಪ್ರತಿ ಕಾರ್ಯಕ್ರಮವೂ ಪೆಟ್ರೋಲ್ ಪದ್ಧತಿಯ ಮೂಲಕ ಕ್ರಮಬದ್ಧತೆ, ಅಚ್ಚುಕಟ್ಟುತನ, ಕೆಲಸದ ಹಂಚಿಕೆ, ಜವಾಬ್ದಾರಿ ಮತ್ತು ಶಿಸ್ತುಬದ್ಧ ಜೀವನಕ್ಕೆ ಜಾಂಬೋರೇಟ್‌ನ ಅನೇಕ ಆಕರ್ಷಕ, ಆಟಗಳು, ಕರಕುಶಲ ವಸ್ತುಗಳ ಕ್ರಿಯಾಶೀಲತೆ, ವಸ್ತು ಪ್ರದರ್ಶನ, ಅನುಭವಗಳ ವಿನಿಮಯ ರಸಪ್ರಶ್ನೆಗಳು, ಕವಾಯತು, ಸಾಹಸಮಯ ಚಟುವಟಿಕೆಗಳು, ಕಾಲ್ನಡಿಗೆಯಿಂದ ಗುರಿ ತಲುಪುವಿಕೆ, ಯುವಧ್ವನಿ ಕೌಶಲ್ಯಗಳ ಪ್ರದರ್ಶ, ಇತರೆ ಜಿಲ್ಲೆಗಳ ಸಾಹಿತ್ಯ, ಪರಂಪರೆ, ಕಲೆ, ಆಹಾರ ಪದ್ಧತಿ, ವೇಷಭೂಷಣ, ಜಾನಪದ ನೃತ್ಯ ಇತ್ಯಾದಿ ಚಟುವಟಿಕೆಗಳ ದೈಹಿಕ ಮತ್ತು ಬೌದ್ಧಿಕ ವಿಕಾಸವನ್ನು ಉಂಟು ಮಾಡುತ್ತದೆ.

ಹುಟ್ಟಿದ ಶಿಶು ವಿಶ್ವಮಾನವನಾಗಬೇಕು ಎಂಬ ಸಂದೇಶದಂತೆ ಬೇಡನ್ ಪಾವೆಲ್ 1907ರಲ್ಲಿ ಸ್ಥಳೀಯ ಹಂತದಿಂದ ಅಂತರಾಷ್ಟ್ರೀಯ ಹಂತದವರೆಗೆ ಬೆಳೆದು ಜವಾಬ್ದಾರಿಯಿಂದ ಬದುಕನ್ನು ಕಲಿಯಬೇಕು ಇದೊಂದು ಸ್ಕೌಟಿಂಗ್ ಎಂಬ ತತ್ವವನ್ನು ಸಾರಿದ್ದಾರೆ.

ಅದರಂತೆ ಡಿಸೆಂಬರ್ 27, 2019 ರಿಂದ ಜನವರಿ 02, 2020ರ ವರೆಗೆ ಡಾ॥ ಆನಿಬೆಸೆಂಟ್ ಸ್ಕೌಟ್–ಗೈಡ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 5000 ಸ್ಕೌಟ್ಸ್–ಗೈಡ್ಸ್ ಹಾಗು ವಯಸ್ಕ ನಾಯಕ–ನಾಯಕಿಯರು ಒಂದೆಡೆ ಸೇರಿ 28ನೇ ರಾಜ್ಯ ಸ್ಕೌಟ್–ಗೈಡ್ ಜಾಂಬೋರೇಟ್ ನಡೆಸಲು ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತ ಹಾಗು ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಸೇರಿ ಬೆಂಗಳೂರು ಉತ್ತರ ಜಿಲ್ಲೆಯ ಸಹಯೋಗದೊಂದಿಗೆ ವಿಶೇಷವಾಗಿ ದೊಡ್ಡ ಮಟ್ಟದಲ್ಲಿ ಆಯೋಜಿಸಿರುವುದು ಹರ್ಷದ ಸಂಗತಿ.

ಈ ಜಾಂಬೋರೇಟ್‌ನ ಮೂಲ ಉದ್ದೇಶ ಸ್ಕೌಟಿಂಗ್ ಶಿಕ್ಷಣದ ಮೂಲಕ ಮಕ್ಕಳಲ್ಲಿ ಸರ್ವಾಂಗೀಣ ಅಭಿವೃದ್ಧಿಯಾಗಿ ಬದುಕುವ ವಿಧಾನವನ್ನು ಕಲೆಯಾಗಿಸುವ ದೊಡ್ಡ ವೇದಿಕೆಯಾಗಿದೆ.



ರಾಜ್ಯ ಕೇಂದ್ರ ಕಛೇರಿಯಲ್ಲಿ ಹಬ್ಬದ ವಾತಾವಣ ನಿರ್ಮಾಣಗೊಂಡು ಸಭೆಗಳು, ಚರ್ಚೆಗಳು, ಕಾರ್ಯಕ್ರಮದ ವೈಖರಿಗಳ ಬಗ್ಗೆ, ಪತ್ರ ವ್ಯವಹಾರ, ಅನುಮತಿ, ಅತಿಥಿಗಳ ಆಹ್ವಾನಿತರ ಬಗ್ಗೆ, ಜಾಂಬೋರೇಟ್‌ನಲ್ಲಿ ನಡೆಸುವ ವಿಶೇಷ ವಿನೂತನ, ಆಕರ್ಷಕ ಚಟುವಟಿಕೆಗಳು, ನಾಯಕರು-ನಾಯಕಿಯರು, ಜವಾಬ್ದಾರಿ ಅನೇಕ ವಿಚಾರಧಾರೆಗಳು, ಚುರುಕುಗೊಂಡು ಕಡಿಮೆ ಅವಧಿಯಲ್ಲಿ ವಿಶಿಷ್ಟ ಜಾಂಬೋರೇಟ್ ನಡೆಸಿ ಇತಿಹಾಸವನ್ನು ಬರೆಯಲು ರಾಜ್ಯ ಮುಖ್ಯ ಆಯುಕ್ತರು ಅನುಭವದ ಧಾರೆ ಹೊನಲಾಗಿ ಹರಿಯುತ್ತಿದೆ. ಹಣ ಸಂಗ್ರಹಿಸುವಿಕೆ, ದಾಸ್ತಾನು, ಸಂಗ್ರಹಣೆ, ಮಕ್ಕಳಿಗೆ ನೀಡುವ ಉಡುಗೊರೆ, ಸೇವಾ ಸಿಬ್ಬಂದಿ, ಹೀಗೆ ಸಾವಿರಾರು ಕೆಲಸ ಕಾರ್ಯಗಳು ರೈಲ್ವೆ ಬೋಗಿಯಂತೆ ಬೆಳೆಯುತ್ತಿದ್ದರೂ ನನಗಂತೂ ತುಂಬಾ ಹೆಮ್ಮೆ ಮತ್ತು ಸಂಭ್ರಮ, ಕಾರಣ ಜಿಲ್ಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಈಗಾಗಲೇ ಜಾಂಬೋರೇಟ್‌ಗೆ ಭಾಗವಹಿಸಲು ಸಿದ್ಧತೆ ನಡೆಸುತ್ತಿರುವುದು ಸಂತೋಷದ ವಿಷಯ.



ಈ ಜಾಂಬೋರೇಟ್‌ನಲ್ಲಿ 24ನೇ ವಿಶ್ವ ಜಾಂಬೂರಿಯ ಮೆರಗನ್ನು ನೆನಪು ಮಾಡಿಕೊಡುವುದರಲ್ಲಿ ಎರಡು ಮಾತಿಲ್ಲ, ಕಾರಣ ವಿಶ್ವ ಬಾಂಧವ್ಯ, ವಿಶೇಷ ದೃಢ ಸಂಕಲ್ಪ ಮತ್ತು ಉತ್ತಮ ಮಾರ್ಗದರ್ಶನ ವಿಶೇಷ ಆಸಕ್ತಿ ಮತ್ತು ಅನುಭವ ಇವುಗಳು ಮಕ್ಕಳ ಬಗೆಗಿನ ಕಳಕಳಿ ಹಾಗೂ ಜಿಲ್ಲೆ ಹಾಗು ರಾಜ್ಯ ಪದಾಧಿಕಾರಿಗಳು ಸಂಪೂರ್ಣ ಸಹಕಾರದೊಂದಿಗೆ ಈ ಜಾಂಬೋರೇಟ್ ಮತ್ತೊಂದು ಇತಿಹಾಸಕ್ಕೆ ಮೈಲುಗಲ್ಲಾಗಲಿದೆ.

ಕರ್ನಾಟಕ ಸರ್ಕಾರ, ಶಿಕ್ಷಣ ಇಲಾಖೆ, ಪೊಲೀಸ್ ಇಲಾಖೆ, ಸಾರ್ವಜನಿಕರಲ್ಲಿ ಹಾಗೂ ಇತರೆ ಎಲ್ಲರ ಸಹಯೋಗದೊಂದಿಗೆ ಈ ಜಾಂಬೋರೇಟ್ ಸ್ಕೌಟ್ಸ್-ಗೈಡ್ಸ್‌ಗಳ ಸಾಮರ್ಥ್ಯಗಳನ್ನು ಬೆಳೆಸುವ ಮೂಲಕ ಹಾಗು ಮನೋರಂಜನೆಯ ತಾಣವಾಗಿ ಮಹಾನ್ ಪೂರಕ ಬೇಡನ್ ಪಾವೆಲ್ಲರ ಮನದಾಳದ ಮಾತುಗಳಲ್ಲಿ ಒಂದಾದ "ಒಬ್ಬ ಬಾಲಕರ ಸ್ಕೌಟ್ ಜೀವನ ಕಡಿಮೆ ಅವಧಿಯಿಂದ ಪ್ರತಿ ಸ್ಕೌಟ್ ಕನಿಷ್ಠ ಒಂದು ದೊಡ್ಡ ರ್‍ಯಾಲಿಯನ್ನು ನೋಡುವುದು & ಭಾಗವಹಿಸುವುದು ಉತ್ತಮ ಏಕೆಂದರೆ ಆ ಬಾಲಕ ಹಿರಿಯ ಸೋದರತ್ವದ ಸದಸ್ಯನಾಗಿರುವುದನ್ನು ಮನಗಾಣುತ್ತದೆ. ನೂತನ ಸ್ಕೌಟಿಂಗ್ ವಿಧಾನಗಳು ಶಿಬಿರವಾಸದಿಂದ ಕಲಿಯುತ್ತವೆ ಹಾಗು ಅನುಭವದಿಂದ ಉತ್ತಮ ಸ್ಕೌಟ್ ಆಗುತ್ತಾನೆ. ತಂಡ ಕಾರ್ಯಬೆಳವಣಿಗೆ ಸಂಘಟನಾ ಕ್ಷಮತೆಯನ್ನು ಬೆಳೆಸುವಲ್ಲಿ ಇಂತಹ ರ್‍ಯಾಲಿಗಳ ಅತ್ಯಂತ ಮಹತ್ವದ್ದು ಇದರಿಂದ ಸ್ಕೌಟ್ ಗುಣಮಟ್ಟ ಸಾಕಷ್ಟು ಉನ್ನತಿಗೊಳ್ಳುವುದು ಈ ಮಾತು ನೈಜ ಚಿತ್ರಣವನ್ನು ನಮ್ಮ ಮನಸ್ಸಿನಲ್ಲಿ ಮೂಡಿಸುತ್ತದೆ.

ಸ್ಕೌಟ್-ಗೈಡ್ ಯುವ ಪ್ರತಿಭೆಗಳೇ ನಾವೆಲ್ಲಾ ನಿಮಗಾಗಿ ನಿಮ್ಮ ಬರುವಿಕೆಗಳು ಕಾಯುತ್ತಿದ್ದೇವೆ ವೀರ ಸೈನಿಕರಂತೆ ಸನ್ನದ್ಧರಾಗಿ ಜಾಂಬೋರೇಟ್‌ನ ಸ್ವಚ್ಛ ವಾತಾವರಣದಲ್ಲಿ ಸೇರಿ ಎಲ್ಲರೂ ಸೇರಿ ಪರಮ ಸಹಿಷ್ಣತೆಯ ನೆಮ್ಮದಿಯ ಸಂತೋಷ ಸಂಭ್ರಮವನ್ನು ಹಂಚಿಕೊಂಡು ಕೌಶ್ಯಲಗಳನ್ನು ಕಲಿಯುತ್ತಾ, ಆದರ್ಶ ಬಾಲಕ-ಬಾಲಕಿಯರಾಗಿ ಆನಂದಮಯ ಜಾಂಬೋರೇಟ್‌ಅನ್ನು ಮಾಡೋಣ ಎನ್ನುತ್ತಾ ಸಹಬಾಳ್ವೆಯ ಬದುಕುವ ವಿಧಾನದ ಯಶಸ್ವಿನ ಗುಟ್ಟು ಜಾಂಬೋರೇಟ್ ಇದರಲ್ಲಿ ನೂರಾರು ಅವಕಾಶ ನಿಮಗಾಗಿ ಕಾದಿವೆ.

ಜೈ ಜಾಂಬೋರೇಟ್

# ಕರ್ನಾಟಕದಲ್ಲಿ ಜಾಂಬೋರೇಟ್ ನಡೆದ

## ದಿನಾಂಕಗಳು ಮತ್ತು ಸ್ಥಳಗಳ ವಿವರಗಳು

| ಕ್ರ.ಸಂ. | ಜಂಬೋರೇಟ್ ನಡೆದ ಸ್ಥಳಗಳು | ಜಂಬೋರೇಟ್ ನಡೆದ ವರ್ಷ ಮತ್ತು ದಿನಾಂಕ |
|---|---|---|
| 1. | ಚಿಕ್ಕಮಗಳೂರು | 1918 ಏಪ್ರಿಲ್ 28 ರಿಂದ ಮೇ 6ರ ವರೆಗೆ |
| 2. | ಬಂಗಾರಪೇಟೆ (ಕೋಲಾರ) | 1920 ಡಿಸೆಂಬರ್ 27 ರಿಂದ 31ರ ವರೆಗೆ |
| 3. | ನಂದಿ (ಕೋಲಾರ) | 1922 ಡಿಸೆಂಬರ್ 30 ರಿಂದ 1923 ಜನವರಿ 2ರ ವರೆಗೆ |
| 4. | ಶಿವಮೊಗ್ಗ | 1926 ಏಪ್ರಿಲ್ 18 ರಿಂದ 21ರ ವರೆಗೆ |
| 5. | ತುಮಕೂರು | 1929 ಏಪ್ರಿಲ್ 15 ರಿಂದ 20ರ ವರೆಗೆ |
| 6. | ಮೈಸೂರು | 1931 ಮೇ 15 ರಿಂದ 18ರ ವರೆಗೆ |
| 7. | ಹಾಸನ | 1933 ಮೇ 9 ರಿಂದ 14ರ ವರೆಗೆ |
| 8. | ಚಿತ್ರದುರ್ಗ | 1938 ಆಗಸ್ಟ್ 12 ರಿಂದ 15ರ ವರೆಗೆ |
| 9. | ಬೆಂಗಳೂರು | 1940 ಡಿಸೆಂಬರ್ 24 ರಿಂದ 28ರ ವರೆಗೆ |
| 10. | ತುಮಕೂರು | 1956 ಮೇ 9 ರಿಂದ 11ರ ವರೆಗೆ |
| 11. | ದೊಡ್ಡಬಳ್ಳಾಪುರ (ಬೆಂಗಳೂರು) | 1967 ಮೇ 12 ರಿಂದ 16ರ ವರೆಗೆ |
| 12. | ಮಡಕೇರಿ (ಕೊಡಗು) | 1070 ಮೇ 8 ರಿಂದ 12ರ ವರೆಗೆ |
| 13. | ಹುಬ್ಬಳ್ಳಿ – ಧಾರವಾಡ | 1972 ಡಿಸೆಂಬರ್ 9 ರಿಂದ 14ರ ವರೆಗೆ |
| 14. | ಸಂಡೂರು (ಬಳ್ಳಾರಿ) | 1975 ಅಕ್ಟೋಬರ್ 18 ರಿಂದ 23ರ ವರೆಗೆ |
| 15. | ಸಕಲೇಶಪುರ (ಹಾಸನ) | 1977 ಡಿಸೆಂಬರ್ 27 ರಿಂದ 1978 ಜನವರಿ 2ರ ವರೆಗೆ |
| 16. | ಕುಮಟ (ಉತ್ತರ ಕನ್ನಡ) | 1980 ಜನವರಿ 17 ರಿಂದ 23ರ ವರೆಗೆ |
| 17. | ರಾಯಚೂರು | 1982 ಜನವರಿ 3 ರಿಂದ 9ರ ವರೆಗೆ |
| 18. | ಮೈಸೂರು | 1985 ಜನವರಿ 23 ರಿಂದ 28ರ ವರೆಗೆ |
| 19. | ಶಿವಮೊಗ್ಗ | 1987 ಡಿಸೆಂಬರ್ 7 ರಿಂದ 14ರ ವರೆಗೆ |
| 20. | ಸುರತ್‌ಕಲ್ (ದಕ್ಷಿಣ ಕನ್ನಡ) | 1990 ಡಿಸೆಂಬರ್ 26 ರಿಂದ 31ರ ವರೆಗೆ |
| 21. | ಕೆ.ಜಿ.ಎಫ್ (ಕೋಲಾರ) | 1993 ಜನವರಿ 16 ರಿಂದ 22ರ ವರೆಗೆ |
| 22. | ಬೀದರ್ | 1995 ಜನವರಿ 22 ರಿಂದ 25ರ ವರೆಗೆ |
| 23. | ತುಮಕೂರು | 1997 ಜನವರಿ 4 ರಿಂದ 10ರ ವರೆಗೆ |
| 24. | ಬೆಳಗಾವಿ | 2001 ಜನವರಿ 4 ರಿಂದ 10ರ ವರೆಗೆ |
| 25. | ದಾವಣಗೆರೆ | 2006 ಜನವರಿ 2 ರಿಂದ 8ರ ವರೆಗೆ |
| 26. | ಬೆಂಗಳೂರು ದಕ್ಷಿಣ | 2011 ಜನವರಿ 6 ರಿಂದ 12ರ ವರೆಗೆ |
| 27. | ಡಾ. ಅನಿಬೆಸೆಂಟ್ ತರಬೇತಿ ಕೇಂದ್ರ ದೊಡ್ಡಬಳ್ಳಾಪುರ | 2015 ಜನವರಿ 17 ರಿಂದ 23ರ ವರೆಗೆ |
| 28. | ಬೆಂಗಳೂರು ಉತ್ತರ<br>ಡಾ. ಅನಿಬೆಸೆಂಟ್ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರ | 2019 ಡಿಸೆಂಬರ್ 27 ರಿಂದ 2020 ಜನವರಿ 2ರ ವರೆಗೆ |

# ಜಿಲ್ಲಾ ವಾರ್ತೆಗಳು

### ಬೋನಾಳ ಪಕ್ಷಿಧಾಮ–ಯಾದಗಿರಿ

ಬೋನಾಳ ಪಕ್ಷಿಧಾಮವು ಯಾದಗಿರಿ ಜಿಲ್ಲೆಯ ಸುರಪೂರ ತಾಲ್ಲೂಕಿನಲ್ಲಿದೆ. ರಾಜ್ಯದ ಎರಡನೇ ಅತಿದೊಡ್ಡ ಪಕ್ಷಿಧಾಮವಾಗಿದೆ. ಅಂದಾಜು 700ಎಕರೆ ವಿಸ್ತಾರವಾದ ಪ್ರದೇಶದ ಕೆರೆಯೊಂದಿಗೆ ಹರಡಿಕೊಂಡಿರು ಇದು ಸುಮಾರು 10 ಸಾವಿರಕ್ಕೂ ವಿಭಿನ್ನ ಪ್ರಬೇಧಗಳ ದೇಳ–ವಿದೇಶಗಳಿಂದ ವಲಸೆ ಬರುವ ಪಕ್ಷಿಗಳ ಆಶ್ರಯತಾಣವಾಗಿದೆ. ಈ ಮೊದಲು ಇದು ಬ್ರಿಟಿಷರಿಗೆ ವಿಹಾರಿ ತಾಣವಾಗಿತ್ತು. ಬೋನಾಳ ಕೆರೆಯನ್ನು ಸುರಪೂರದ ದೊರೆ ರಾಜಾ ಪಾಮನಾಯಕ 17ನೇ ಶತಮಾನದಲ್ಲಿ ಕಟ್ಟಿಸಿದರು.

## ಬಳ್ಳಾರಿ

ನವೆಂಬರ್ 7ರಂದು ಭಾರತ್ ಸ್ಕೌಟ್ಸ್–ಗೈಡ್ಸ್ ಜಿಲ್ಲಾ ಸಂಸ್ಥೆ ಬಳ್ಳಾರಿ ವತಿಯಿಂದ ಸಂಸ್ಥೆಯ ಸಂಸ್ಥಾಪನಾ ದಿನಾಚರಣೆಯ ನಿಮಿತ್ತ ಜಿಲ್ಲಾಡಳಿತ ಭವನದ ಸಭಾಂಗಣದಲ್ಲಿ ಜಿಲ್ಲಾಧಿಕಾರಿಗಳಾದ ಶ್ರೀ ಎಸ್. ಎಸ್. ನಕುಲ್ ಇವರು ಧ್ವಜಚೀಟಿ ಬಿಡುಗಡೆ ಮಾಡಿದರು. 350 ಸ್ಕೌಟ್ಸ್–ಗೈಡ್ಸ್‌ಗಳು ಮತ್ತು ಜಿಲ್ಲೆಯ ಪದಾಧಿಕಾರಿಗಳು ಭಾಗವಹಿಸಿದ್ದರು. ಸಂಸ್ಥಾಪನಾ ದಿನಾಚರಣೆಯ ಬಗ್ಗೆ ಶ್ರೀಮತಿ ಮಲ್ಲೇಶ್ವರಿ ಜುಜಾರೆ ರವರು ಸಂಕ್ಷಿಪ್ತವಾಗಿ ತಿಳಿಸಿ, ಎಲ್ಲರನ್ನು ಸ್ವಾಗತಿಸಿದರು.



ಜಿಲ್ಲಾಧಿಕಾರಿಗಳು ತಮ್ಮ ಅಧ್ಯಕ್ಷತೆಯ ನುಡಿಯಲ್ಲಿ ಮಕ್ಕಳಿಗೆ ಓದಿನ ಜೊತೆಗೆ ಈ ರೀತಿಯ ಹಲವಾರ ಬೇರೆ ಬೇರೆ ಚಟುವಟಿಕೆಗಳಲ್ಲಿ ಸಹ ಭಾಗವಹಿಸಬೇಕು ಹಾಗೂ ತಮ್ಮ ವಿದ್ಯಾಭ್ಯಾಸವನ್ನು ಉತ್ತಮಗೊಳಿಸಿಕೊಳ್ಳಬೇಕೆಂದು ಹಾರೈಸಿದರು. ಈ ಕಾರ್ಯಕ್ರಮದಲ್ಲಿ ಒಟ್ಟು ರೂ. 20,000 ಹಣವನ್ನು ಸಂಗ್ರಹಿಸಲಾಯಿತು.



## ಬೆಳಗಾವಿ

ನವೆಂಬರ್ 9 ರಿಂದ 11ರ ವರೆಗೆ ಜಿಲ್ಲಾ ಸಂಸ್ಥೆ ಬೆಳಗಾವಿ, ಸ್ಥಳೀಯ ಸಂಸ್ಥೆ ಗೋಕಾಕ ಮತ್ತು ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆ ಇವುಗಳ ಸಂಯುಕ್ತಾಶ್ರಯದಲ್ಲಿ ತೃತೀಯ ಸೋಪಾನದ ಪೂರ್ವಸಿದ್ಧತಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಕೆ.ಎಲ್.ಇ.



ವಿವಿಧ ಅಂಗ ಶಿಕ್ಷಣ ಸಂಸ್ಥೆಗಳಿಂದ 134 ಸ್ಕೌಟ್ಸ್–ಗೈಡ್ಸ್‌ಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ನಗರದ ಖ್ಯಾತ ವೈದ್ಯರಾದ ಡಾ॥ ದಿನೇಶ್ ಕೌಶಿಕ್ ರವರು ಆಗಮಿಸಿ ಪ್ರಥಮ ಚಿಕಿತ್ಸೆಗೆ ಸಂಬಂಧಿಸಿದಂತೆ ಸ್ಕೌಟ್ಸ್–ಗೈಡ್ಸ್‌ಗಳಿಗೆ ಸಮಗ್ರವಾದ ತಿಳುವಳಿಕೆಯನ್ನು ನೀಡಿ, ಸ್ಕೌಟ್ಸ್–ಗೈಡ್ಸ್ ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿದರು.

* ನವೆಂಬರ್ 8 ರಂದು ಜಿಲ್ಲಾ ಸಂಸ್ಥೆ ವತಿಯಿಂದ ಜೈ ಜಿನೇಂದ್ರ ಎಜ್ಯುಕೇಶನ್ ಟ್ರಸ್ಟ್ ಕನ್ನಡ ಮಾಧ್ಯಮ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಸ್ಕೌಟ್ಸ್–ಗೈಡ್ಸ್ ಸಪ್ತಾಹದ ನಿಮಿತ್ತ ಶಾಲೆಯ ಮೈದಾನದಲ್ಲಿ ಬೇಡನ್ ಪೊವೆಲ್‌ರ ಹಾಗೂ ಲೇಡಿ ಬೇಡನ್ ಪೊವೆಲ್‌ರ ಫೋಟೋ ಪೂಜಾ ಕಾರ್ಯಕ್ರಮದಲ್ಲಿ ಪ್ರಾಥಮಿಕ ವಿಭಾಗದ ಮುಖ್ಯ ಶಿಕ್ಷಕ ಶ್ರೀ ಸಂದೀಪ ಮೋಹಿತೆ ಹಾಗೂ ಪ್ರೌಢ ವಿಭಾಗದ ಮುಖ್ಯ ಶಿಕ್ಷಕ ಶ್ರೀ ಅಭಯಕುಮಾರ ದೇಸಾಯಿ, ಸ್ಕೌಟ್ ಮಾಸ್ಟರ್ ಶ್ರೀ ರಾಜಾರಾಮ ಹಾಗೂ ಗೈಡ್ ಕ್ಯಾಪ್ಟನ್ ಶ್ರೀಮತಿ ಸವಿತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು ಪ್ರೌಢ ವಿಭಾಗದ ಮುಖ್ಯ ಶಿಕ್ಷಕ ಶ್ರೀ ಅಭಯಕುಮಾರ ದೇಸಾಯಿ ಅವರು



"ಹೆಲ್ಮೆಟ್ ಧರಿಸಿ ಜೀವ ಉಳಿಸಿ" ಎಂಬ ಘೋಷಣೆಯೊಂದಿಗೆ ರ್‍ಯಾಲಿಗೆ ಚಾಲನೆ ನೀಡಿದರು. ಗೈಡ್ಸ್‌ಗಳು ಗ್ರಾಮದ ಪ್ರಮುಖ ಬೀದಿಗಳಲ್ಲಿ ಸಂಚರಿಸಿ ಹೆಲ್ಮೆಟ್ ಧರಿಸಬೇಕು ಎಂಬ ಸಂದೇಶವನ್ನು ನೀಡುತ್ತಾ ಜನರಲ್ಲಿ ಜಾಗೃತಿಯನ್ನು ತುಂಬುವಲ್ಲಿ ಯಶಸ್ವಿಯಾದರು. ಶಿಬಿರದ ನಾಯಕರಾಗಿ ಎ.ಎಸ್.ಓ.ಸಿ. ಶ್ರೀ ಡಿ.ಬಿ. ಅತ್ತಾರ ಕಾರ್ಯ ನಿರ್ವಹಿಸಿದರು.

* ಅಕ್ಟೋಬರ್ 17ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಹಾಗೂ ಜಿಲ್ಲಾ ಸಂಸ್ಥೆ ಬೆಳಗಾವಿ ಇವರುಗಳ ಆಶ್ರಯದಲ್ಲಿ ಮರಾಠಾ ಮಂಡಳ ಪ್ರೌಢಶಾಲೆ ಬೆಳಗಾವಿಯಲ್ಲಿ ವಿಭಾಗೀಯಮಟ್ಟದ ಉಪನಿರ್ದೇಶಕರು (ಆಡಳಿತ), ಉಪನಿರ್ದೇಶಕರು ಅಭಿವೃದ್ಧಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಜಿಲ್ಲಾ-ತಾಲ್ಲೂಕು ನೋಡೆಲ್ ಅಧಿಕಾರಿಗಳ ಒಂದು ದಿನದ ಮಾಹಿತಿ ಶಿಬಿರವು ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಇವರ ಉಪಸ್ಥಿತಿ ಹಾಗೂ ಮಾರ್ಗದರ್ಶನದಲ್ಲಿ ಜರುಗಿತು.

ಸದರಿ ಕಾರ್ಯಕ್ರಮವನ್ನು ರಾಜ್ಯ ಮುಖ್ಯ ಆಯುಕ್ತರು ಹಾಗೂ ಎಲ್ಲ ಅತಿಥಿಗಳು ಸಸಿಗೆ ನೀರು ಎರೆಯುವುದರ ಮುಖಾಂತರ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸ್ಕೌಟ್ಸ್-ಗೈಡ್ಸ್ ಚಳವಳಿಯನ್ನು ಆಯಾ ಕ್ಷೇತ್ರಗಳಲ್ಲಿ ಅನುಷ್ಠಾನ ಗೊಳಿಸುವಲ್ಲಿ ಶಿಕ್ಷಣ ಇಲಾಖೆಯ ಎಲ್ಲ ಸಮಸ್ತ ಅಧಿಕಾರಿಗಳ ಪಾತ್ರ ಜವಾಬ್ದಾರಿಯುತವಾಗಿದೆ. ಅದನ್ನು ಯಶಸ್ವಿಯಾಗಿ ನಿರ್ವಹಿಸಲು ತಿಳಿಸಿದರು. ಜೊತೆಗೆ ಜಿಲ್ಲಾ ಪ್ರಗತಿಯ ಬಗ್ಗೆ ಉಪನಿರ್ದೇಶಕರು ಹಾಗೂ ಜಿಲ್ಲಾ ಮುಖ್ಯ



ಆಯುಕ್ತರುಗಳಿಂದ ಅಭಿಪ್ರಾಯ ಸಂಗ್ರಹಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬೆಳಗಾವಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಗಜಾನನ ಮನ್ನಿಕೇರಿ ವಹಿಸಿದ್ದರು.

ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಬಿ.ಕೆ. ಬಸವರಾಜ, ರಾಜ್ಯ ತರಬೇತಿ ಆಯುಕ್ತ ಶ್ರೀಮತಿ ಶ್ಯಾಮಲಾ, ಕೆ.ವಿ. ಬೆಳಗಾವಿ ವಿಭಾಗೀಯ ಆಯುಕ್ತರು ಹಾಗೂ ಧಾರವಾಡ ಜಿಲ್ಲಾ ಮುಖ್ಯ ಆಯುಕ್ತಾದ ಶ್ರೀ ಎಂ.ಎಂ. ಲೋಂಡೆ, ಒಟ್ಟು 5 ಜಿಲ್ಲೆಗಳಿಂದ 8 ಉಪನಿರ್ದೇಶಕರುಗಳು, 29 ಕ್ಷೇತ್ರ ಶಿಕ್ಷಣಾಧಿಕಾರಿಗಳು 32 ನೋಡಲ್ ಅಧಿಕಾರಿಗಳು 27 ಜನ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, 31 ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಒಟ್ಟು 127 ಜನರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

* ನವೆಂಬರ್ 14 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಹಾಗೂ ಜೈನ ಹೆರಿಟೇಜ ಶಾಲೆ, ಬೆಳಗಾವಿ ಇವರ ಸಹಯೋಗದಲ್ಲಿ ಟಿಳಕವಾಡಿಯ ವಲಯ ಸರಕಾರಿ ಶಾಲೆಯ ಮಕ್ಕಳಿಗೆ ವಿಶೇಷ ಸ್ಪರ್ಧೆ ಹಾಗೂ ಮೋಜಿನ ಆಟಗಳನ್ನು ಆಡಿಸುವ ಮೂಲಕ ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು.

ದಿ. ಪಂಡಿತ ಜವಾಹರ ನೆಹರುರವರ ಭಾವಚಿತ್ರಕ್ಕೆ ಪುಷ್ಪಾರ್ಪಣೆ ಮಾಡುವ ಮೂಲಕ ಕಾರ್ಯಕ್ರಮ ಪ್ರಾರಂಭಿಸಲಾಯಿತು.

ಸದರಿ ಕಾರ್ಯಕ್ರಮದಲ್ಲಿ ಶ್ರೀಮತಿ ಕೆ. ಶ್ರದ್ಧಾ, ನಿರ್ದೇಶಕರು ಜೈನ್ ಶಿಕ್ಷಣ ಸಂಸ್ಥೆ ಬೆಳಗಾವಿ, ಶ್ರೀಮತಿ ಪ್ರಭಾವತಿ ಪಾಟೀಲ್, ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಸಲಹಾ ಸಮಿತಿ ಸದಸ್ಯರು ಹಾಗೂ ಜೈನ್ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಸ್ಥಳೀಯ 5 ಸರಕಾರಿ ಶಾಲೆಯ 250 ವಿದ್ಯಾರ್ಥಿಗಳು ಭಾಗವಹಿಸಿದ್ದರು. ವಿಶೇಷ ಸ್ಪರ್ಧೆ ಹಾಗೂ ಮೋಜಿನ ಆಟಗಳಲ್ಲಿ ವಿಜೇತರಾದ ಮಕ್ಕಳಿಗೆ ಜೈನ ಶಿಕ್ಷಣ ಸಂಸ್ಥೆ ಅವರು ಉಡುಗೊರೆಗಳನ್ನು ನೀಡಿ ಪ್ರೋತ್ಸಾಹಿಸಿದರು.

* ನವೆಂಬರ್ 7ರಂದು ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ನಂ. 24 ಮಹಾಂತೇಶ್ ನಗರ ಬೆಳಗಾವಿ, ಇಲ್ಲಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಳಗಾವಿ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ಸಹಯೋಗದಲ್ಲಿ ಆಯೋಜಿಸಿದ ಸ್ಕೌಟ್-ಗೈಡ್ ಪ್ರಾರಂಭಿಕ ಶಿಬಿರದಲ್ಲಿ ಶ್ರೀಮತಿ ಪ್ರಭಾವತಿ ಪಾಟೀಲ, ಜಿಲ್ಲಾ ಗೈಡ್ ಆಯುಕ್ತರು, ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.

## ಬೆಂಗಳೂರು ಪೂರ್ವ

ಅಕ್ಟೋಬರ್ 23 ರಂದು ಆನೇಕಲ್‌ನ ಬಿ.ಆರ್.ಸಿ. ಕೇಂದ್ರದಲ್ಲಿ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಸಂಸ್ಥೆ, ಸ್ಥಳೀಯ ಸಂಸ್ಥೆ ಹಾಗೂ ಶಿಕ್ಷಣ ಇಲಾಖೆಯ ಬಿ.ಆರ್.ಸಿ., ಬಿ.ಆರ್.ಪಿ., ಮತ್ತು ಸಿ.ಆರ್.ಪಿ.ಗಳ ಸಭೆಯನ್ನು ಆಯೋಜಿಸಲಾಗಿತ್ತು.

ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ.ಆರ್. ರಾಮಮೂರ್ತಿ ರವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಕ್ಷೇತ್ರ ಸಮನ್ವಯಾಧಿಕಾರಿ ಹಾಗೂ ಜಿಲ್ಲಾ ಆಯುಕ್ತರು (ಸ್ಕೌ) ಶ್ರೀ ಎನ್. ಶಂಕರಮೂರ್ತಿ ಜಿಲ್ಲಾ ಆಯುಕ್ತರು (ಗೈ) ಶ್ರೀಮತಿ ಎಂ. ವಿಜಯಲಕ್ಷ್ಮಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್ ಸೇರಿದಂತೆ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳು ಸಭೆಯಲ್ಲಿ ಉಪಸ್ಥಿತರಿದ್ದರು.




* ನವೆಂಬರ್ 2 ರಿಂದ 3ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯವರು ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ ಭವನದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ದೇಶಭಕ್ತಿ ಗೀತೆಗಳ ಗೀತಗಾಯನ ಸ್ಪರ್ಧೆಯಲ್ಲಿ ಎಲೆಕ್ಟ್ರಾನಿಕ್ ಸಿಟಿಯ ಡೆಲ್ಲಿ ಪಬ್ಲಿಕ್ ಸ್ಕೂಲ್‌ನ ಸ್ಕೌಟ್ಸ್ 2ನೇ ಬಹುಮಾನ, ಸೂರ್ಯಾಸಿಟಿಯ ಸುರಾನಾ ವಿದ್ಯಾಲಯದ ಕಬ್ ರಕ್ಷಿತ್ 3ನೇ ಬಹುಮಾನ ಹಾಗು ಹುಸ್ಕೂರಿನ ಸರ್ಕಾರಿ ಪ್ರೌಢಶಾಲೆಯ ಗೈಡ್ಸ್ ವಿಭಾಗ ಮಟ್ಟದಲ್ಲಿ 3ನೇ ಬಹುಮಾನ ಗಳಿಸಿದ್ದಾರೆ.

## ಬೆಂಗಳೂರು ಉತ್ತರ

Shivajinagar Local Association, Conducted Basic Course for Cub Masters from 9-10-2019 to 15-10-2019 at Holy Angels Higher Primary School. There were 12 candidates. The Leader of the course was Sri Krishna Murthy ALT© and DTC Mandya Dist. Sri Prasanna Kroothy, HWB(C) Inaugurated the camp. Sri T.S. Lucas L.T.(S) President of L.A. took a Session. Sr. Cylivia was the Chief guest for the Grand Camp Fire. Dr. Latha Murthy was the Chief Guest for Validectory Function.

## ಬೆಂಗಳೂರು ದಕ್ಷಿಣ

ಅಕ್ಟೋಬರ್ 12 ಮತ್ತು 13 ರಂದು ರಾಜ್ಯ ಸಂಸ್ಥೆಯ ಆವರಣದಲ್ಲಿ ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ವತಿಯಿಂದ ಕಬ್ಸ್-ಬುಲ್‌ಬುಲ್ಸ್‌ಗಳಿಗೆ ತೃತೀಯ ಚರಣ್



ಮತ್ತು ಸುವರ್ಣ ಪಂಖ್ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಯಿತು. ಈ ಪರೀಕ್ಷಾ ಶಿಬಿರದಲ್ಲಿ 90 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಶಿಬಿರದ ಸಮಾರೋಪ ಸಮಾರಂಭಕ್ಕೆ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಆಗಮಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ಸಹಾಯಕ ಕಾರ್ಯದರ್ಶಿ ಶ್ರೀ ಎಂ.ಎಸ್. ಸತೀಶ್ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಬಿ.ಎಸ್. ಅನಂತ್, ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀಮತಿ ವಿಕ್ಟೋರಿಯಾ ಅಮಲ ರಾಣಿ, ಜಿಲ್ಲಾ ಜಂಟಿ ಕಾರ್ಯದರ್ಶಿ, ಶ್ರೀಮತಿ ಉಷ, ಶ್ರೀಮತಿ ಭಾರತೀ ಚಕ್ರವರ್ತಿ ಶ್ರೀ ಚಂದ್ರು ಪಿ. ಜಿಲ್ಲಾ ಸಂಘಟಕರು ಉಪಸ್ಥಿತರಿದ್ದರು.

* ಜ್ಯೂಬಿಲಿ ಆಂಗ್ಲ ಪ್ರೌಢಶಾಲೆ, ಆರ್.ಎಂ. ನಗರ, ಕೆ.ಆರ್. ಪುರಂ ಶಾಲೆಯ ಶ್ರೀ ಸತೀಶ್, ಸ್ಕೌಟ್ ಮಾಸ್ಟರ್ ನೇತೃತ್ವದಲ್ಲಿ ಶಾಲೆಯ ಸ್ಕೌಟ್-ಗೈಡ್‌ಗಳು ಮತ್ತು



ಭಾರತೀಯ ರೈಲ್ವೆಯ ಅಧಿಕಾರಿಗಳ ಸಹಯೋಗದೊಂದಿಗೆ ಸ್ವಚ್ಛ ಭಾರತ ಅಭಿಯಾನದ ಬಗ್ಗೆ ಜನರಲ್ಲಿ ಮತ್ತು ಅರಿವು ಮೂಡಿಸುವ ಜಾಥವನ್ನು ಕೆ.ಆರ್. ಪುರಂ ರೈಲ್ವೆ ನಿಲ್ದಾಣದಲ್ಲಿ ಹಾಗೂ ಕೆ.ಆರ್.ಪುರಂ ಸುತ್ತಮುತ್ತ ಪ್ರದೇಶದಲ್ಲಿ ಹಮ್ಮಿಕೊಳ್ಳಲಾಯಿತು.

* ಕ್ಯಾಥಡ್ರಿಲ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಪ್ಲಾಸ್ಟಿಕ್ ಬ್ಯಾಗ್‌ಗಳನ್ನು ಬಳಕೆ ನಿಷೇದ ಮಾಡಿ ಪರಿಸರವನ್ನು ಉಳಿಸಿ ಬಟ್ಟೆ ಚೀಲ ಬಳಸಿ ಎಂದು ಜನರಲ್ಲಿ ಅರಿವು ಮೂಡಿಸುವ ಜಾಥವನ್ನು ರಿಚ್‌ಮಂಡ್ ರಸ್ತೆಯ ಸುತ್ತಮುತ್ತ ಮಾಡಿದರು. ಕಾರ್ಯಕ್ರಮದಲ್ಲಿ ಪುಕಿಷ ಮೇರಿ, ಕ್ಯಾಥಡ್ರಿಲ್ ಶಾಲೆಯ ಗೈಡ್ ಕ್ಯಾಪ್ಟನ್ ಹಾಗೂ ಹಲಸೂರು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಭಾಗವಹಿಸಿದ್ದರು.

ಬೆಂಗಳೂರು ದಕ್ಷಿಣ ಜಿಲ್ಲೆಯ ಮುಕ್ತ ದಳಗಳಾದ ಗಾಯತ್ರಿ ಕಂಪನಿ ಮತ್ತು ಉದಯ ಸ್ಕೌಟ್ ಟ್ರೂಪ್ ತನ್ನ ಮೂವತ್ತಾರನೇ ವರ್ಷವನ್ನು ಮುಗಿಸಿ ಮುವತ್ತೇಳಕ್ಕೆ ಕಾಲಿಡುತ್ತಿದೆ. ಸ್ಕೌಟ್ ಗೈಡ್ ಚಟುವಟಿಕೆಗಳ ಜೊತೆಯಲ್ಲಿ ಸ್ಕೌಟ್ ಗೈಡಿನ ನಿಯಮವಾದ "ಸದಾ ಸೇವೆಗೆ ಸಿದ್ಧವಾಗಿರಿ" ಎಂಬ ತತ್ತ್ವವನ್ನು ಅಕ್ಷರಶಃ ಅನುಸಿರುತ್ತಾ ಎಲ್ಲ ಸ್ಕೌಟ್-ಗೈಡ್‌ಗಳನ್ನು ಸಮಾಜ ಸೇವೆಯಲ್ಲಿ ತೊಡಗಿಸುತ್ತಾ ಬಂದಿದೆ. ತನ್ನ ವಾರ್ಷಿಕ ಕಾರ್ಯಕ್ರಮ ಅನುಸಾರವಾಗಿ ಇದೇ ತಿಂಗಳು 14 ರಿಂದ 17ರ ವರೆಗೆ ಪ್ರಕೃತಿ ಮತ್ತು ಪರಿಸರ ಜಾಗೃತಿ ಶಿಬಿರವನ್ನು ಕೊಡಗು ಜಿಲ್ಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಅದರ ಅಂಗವಾಗಿ ಸಂತ್ರಸ್ಥ ನೂರೈವತ್ತು ಮಕ್ಕಳಿಗಾಗಿ ಸಿದ್ಧ ಉಡುಪುಗಳನ್ನು ಕಂಬಳಿ ಮತ್ತು ಬೆಡ್‌ಶೀಟುಗಳನ್ನು ಸೌಟ್-ಗೈಡ್ ಜಿಲ್ಲಾ ಆಯುಕ್ತರಾದ ಶ್ರೀ ಜಿಮ್ಮಿ ಸಿಕ್ವೇರಾ ಮತ್ತು ಶ್ರೀಮತಿ ದಮಯಂತಿ ಅವರ ಸಹಕಾರದೊಂದಿಗೆ ವಿತರಿಸಲಾಯಿತು. ಜಿಲ್ಲಾ ಆಯುಕ್ತರುಗಳು ಮಾತಾಡುತ್ತಾ ನಿಜಕ್ಕೂ ಸ್ಕೌಟ್ ಗೈಡಿನ ಮೂಲಭೂತ ಆಸಯಗಳನ್ನು ಈ ಮುಕ್ತದಳವು ಅನುಸರಿಸುತ್ತಾ ಬಂದಿದೆ ನಿಜಕ್ಕೂ ಎಲ್ಲ ದಳಗಳಿಗೂ ಇದು ಮಾದರಿಯಾಗಿದೆ. ಇದರಿಂದ ಸ್ಕೌಟ್ ಗೈಡ್‌ಗಳು ಮುಂದೆ ಇದೇ ರೀತಿ ಸಹಾಯಹಸ್ತವನ್ನು ನೀಡುವ ಭಾವನೆಗಳನ್ನು ಬೆಳೆಸಿಕೊಳ್ಳುತ್ತಾರೆ. ಬೆಂಗಳೂರಿನಿಂದ ಇಲ್ಲಿಗೆ ಆಗಮಿಸಿ ನಮ್ಮೊಡನೆ ಪ್ಲಾಸ್ಟಿಕ್ ಮುಕ್ತ ಕೊಡಗು ಜಾಥಾದಲ್ಲಿ ಭಾಗವಹಿಸಿ ಸಹಕರಿಸಿದ್ದಾರೆ. ದಳದ ನಾಯಕ ಗುರೂಜಿ ಶ್ರೀ ಸತ್ಯನಾರಾಯಣ್ ಹಾಗೂ ದಳದ ನಾಯಕಿ ಶ್ರೀಮತಿ ಗಿರಿಜಾ ಎಸ್. ನಾರಾಯಣ್ ಅವರಿಗೆ ಮತ್ತು ಮಕ್ಕಳಿಗೂ ಜಿಲ್ಲೆಯ ಪರವಾಗಿ ಧನ್ಯವಾದಗಳು ಮತ್ತು ಶುಭಹಾರೈಕೆಗಳು ಎಂದು ನುಡಿದರು.




## ಚಾಮರಾಜನಗರ

ಅಕ್ಟೋಬರ್ 5 ರಿಂದ 7ರ ವರೆಗೆ ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಪದಕ ತರಬೇತಿ ಶಿಬಿರವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಪ್ಪಾರ ಬೀದಿ, ಚಾಮರಾಜನಗರ ತಾಲೂಕಿನಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರಕ್ಕೆ ಶ್ರೀ ಷರಾಫ್ ಮಾದಪ್ಪ, ಜಿಲ್ಲಾ ಆಯುಕ್ತರು (ಸ್ಕೌ), ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಶ್ರೀ ಕೆ.ಎಸ್. ಮಹಾದೇವಸ್ವಾಮಿ, ಕುಮಾರಿ ಪಿ. ಕಮಲಮ್ಮ ಮತ್ತು ಜಿಲ್ಲಾ ಸಂಘಟಕ ಶ್ರೀ ಅಶೋಕ್ ಕುಮಾರ್ ಕೆ.ಪಿ. ರವರು ಭೇಟಿ ನೀಡಿದ್ದರು. ಈ ಶಿಬಿರದಲ್ಲಿ ಒಟ್ಟು 42 ಕಬ್ಸ್ ಮತ್ತು ಬುಲ್ ಬುಲ್ಸ್‌ಗಳು ಹಾಜರಿದ್ದರು. ಇದೇ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳಿಗೆ ಪ್ರಥಮ ಚಿಕಿತ್ಸೆ ತರಬೇತಿಯನ್ನು ಹಮ್ಮಿಕೊಳ್ಳಲಾಗಿತ್ತು.

* ಸೆಪ್ಟೆಂಬರ್ 6 ರಿಂದ 10ರ ವರೆಗೆ ಆದರ್ಶ ಶಾಲೆ ಚಾಮರಾಜನಗರ ಇಲ್ಲಿ ರೋವರ್ಸ್-ರೇಂಜರ್ಸ್‌ಗಳಿಗೆ ನಿಪುಣ್ ಪರೀಕ್ಷಾ ಶಿಬಿರ ಜರುಗಿತು. ಈ ಶಿಬಿರದಲ್ಲಿ ಸುಮಾರು 150 ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಸಂಪನ್ಮೂಲ ವ್ಯಕ್ತಿಗಳಾಗಿ 15 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಜಿಲ್ಲಾ ಆಯುಕ್ತ(ಸ್ಕೌ) ಶ್ರೀ ಬಿ. ಷರಾಫ್ ಮಾದಪ್ಪ, ಜಿಲ್ಲಾ ಆಯುಕ್ತೆ(ಗೈ) ಡಾ॥ ಶ್ವೇತಾ ಶಶಿಧರ್, ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರ, ಕಮಲಮ್ಮ ಮತ್ತು ಜಿಲ್ಲಾ ಸಂಘಟಕರಾದ ಶ್ರೀ ಕೆ. ಪಿ. ಅಶೋಕ್ ಕುಮಾರ್ ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ರೇಂಜರಿಂಗ್ ಶತಮಾನೋತ್ಸವವನ್ನು ಆಚರಿಸಲಾಯಿತು.

## ಚಿತ್ರದುರ್ಗ

ಮೊಟ್ಟಮೊದಲ ಬಾರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ರೋವರ್ಸ್-ರೇಂಜರ್‌ಗಳಿಗೆ ನಿಪುಣ್ ತರಬೇತಿ ಶಿಬಿರವನ್ನು ಕೊಂಡಜ್ಜಿ ಬಸಪ್ಪ ರಾಜ್ಯ ತರಬೇತಿ ಕೇಂದ್ರದಲ್ಲಿ ಆಯೋಜಿಸಿರುವುದು ಸಂತೋಷದ ಸಂಗತಿ ಎಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಹೇಳಿದರು.





ಕೊಂಡಜ್ಜಿ ಬಸಪ್ಪ ರಾಜ್ಯ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ಅಕ್ಟೋಬರ್ 15 ರಿಂದ 18ರ ವರೆಗೆ ಆಯೋಜಿಸಿದ್ದ ಜಿಲ್ಲಾ ರೋವರ್ಸ್-ರೇಂಜರ್ಸ್ ನಿಪುಣ್ ತರಬೇತಿ ಶಿಬಿರದ ಸಮಾರೋಪದಲ್ಲಿ ಅವರು ಮಾತನಾಡಿದರು.

ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ ಮಾತನಾಡಿ ಪದವಿ ಹಂತದಲ್ಲಿ ರೋವರ್ಸ್-ರೇಂಜರ್ಸ್ ಶಿಕ್ಷಣ ಪಡೆದು ಪ್ರತಿಯೊಬ್ಬರು ಸ್ವಾವಲಂಬಿ ಜೀವನ ನಡೆಸಲು ಸನ್ನದ್ಧರಾಗಬೇಕು ಎಂದರು.

ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಬಿ.ಕೆ. ಬಸವರಾಜ್ ಮಾತನಾಡಿ, ನಿಸರ್ಗದಲ್ಲಿ ಬದುಕುವ ಪ್ರಾಣಿ ಪಕ್ಷಿಗಳಿಗಿಂತ ವಿಭಿನ್ನವಾದ ಪ್ರಾಣಿ ಮಾನವ. ಪ್ರತಿಯೊಂದು ಜೀವಿಯು ಜೀವ ವೈವಿಧ್ಯದಲ್ಲಿ ತನ್ನದೆಯಾದ ಪ್ರತಿಭೆಯನ್ನು ಹೊರ ಹಾಕುತ್ತವೆ. ಅದೇ ರೀತಿ ಮಾನವರಾದ ನಾವುಗಳು ಸಮಾಜಮುಖಿ ಕೆಲಸಗಳನ್ನು ತೊಡಗಿಸಿಕೊಂಡು ಉತ್ತಮ ವ್ಯಕ್ತಿಗಳಾಗಿ ಬದುಕುವ ಗುಣಧರ್ಮ ಹೊಂದಬೇಕು ಎಂದು ಹೇಳಿದರು.

ಶಿಬಿರದ ನಾಯಕರಾದ ಶ್ರೀ ರಾಜೇಶ್ ಅವಲಕ್ಕಿ, ಅವರು ಮಾತನಾಡಿ, ನಾಲ್ಕು ದಿನದ ನಿಪುಣ್ ತರಬೇತಿ ಶಿಬಿರದಲ್ಲಿ ರೋವರ್ಸ್-ರೇಂಜರ್ಸ್‌ಗಳು ಸಂತೋಷದಿಂದ ಪಾಲ್ಗೊಂಡು ಮುಂದಿನ ರಾಜ್ಯ ಪುರಸ್ಕಾರ್ ತರಬೇತಿ ಶಿಬಿರವನ್ನು ಸಹ ಇದೇ ರೀತಿ ಯಶಸ್ವಿಯಾಗಿ ಪೂರೈಸಿಕೊಳ್ಳಿ ಎಂದು ಹಾರೈಸಿದರು.

## ಚಿಕ್ಕಬಳ್ಳಾಪುರ

ಅಕ್ಟೋಬರ್ 12 ರಿಂದ 15ರ ವರೆಗೆ ಸರ್.ಎಂ. ವಿಶ್ವೇಶ್ವರಯ್ಯ ತಾಂತ್ರಿಕ ಮಹಾವಿದ್ಯಾಲಯ, ಮುದ್ದೇನಹಳ್ಳಿ, ಇಲ್ಲಿ ರೋವರ್ಸ್-ರೇಂಜರ್ಸ್‌ಗಳ ಜಿಲ್ಲಾ ಮಟ್ಟದ ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರವನ್ನು ಆಯೋಜಿಸಲಾಗಿತ್ತು. ವಿಶ್ವೇಶ್ವರಯ್ಯ ಮಹಾ ತಾಂತ್ರಿಕ ಮಹಾವಿದ್ಯಾಲಯದ ಸಂಯೋಜಕರಾದ ಡಾ॥ ಚಿಕ್ಕಣ್ಣನವರ ಅಧ್ಯಕ್ಷತೆಯಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರ ಘನ ಉಪಸ್ಥಿತಿಯಲ್ಲಿ ಉದ್ಘಾಟನಾ ಕಾರ್ಯಕ್ರಮ ನೆರವೇರಿಸಲಾಯಿತು.

ಉದ್ಘಾಟನಾ ಭಾಷಣ ಮಾಡಿದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ರೋವರ್-ರೇಂಜರ್, ಸ್ಕೌಟ್ಸ್-ಗೈಡ್ಸ್ ನಲ್ಲಿನ ಮೂಲಭೂತ ತತ್ವಗಳನ್ನು ಅಳವಡಿಸಿಕೊಂಡು ಸಮಾಜದಲ್ಲಿ ಉತ್ತಮ ನಾಗರೀಕರಾಗುವಂತೆ ತಿಳಿಸಿದರು. ರೋವರ್-ರೇಂಜರ್‌ಗಳ ಮುಂದಿನ ಅವಕಾಶಗಳಕುರಿತು ತಿಳಿಸಿ ಶುಭ ಹಾರೈಸಿದರು.

ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಶಿವಪುತ್ರಪ್ಪ ಸಂ. ಭೂತಲ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಮನೋಹರ್ ಡಿ.ಎಸ್. ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಅರುಣ್ ಕುಮಾರ್ ಡಿ. ಹಾಗೂ ಶಿಬಿರದ ನಾಯಕರುಗಳು ಹಾಗೂ ರೋವರ್-ರೇಂಜರ್ ಉಪಸ್ಥಿತರಿದ್ದರು.



* ಅಕ್ಟೋಬರ್ 2 ರಂದು ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಮಹಾತ್ಮ ಗಾಂಧೀಜಿ ರವರವ 150ನೇ ಜನ್ಮ ದಿನಾಚರಣೆ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರಿರವರ ಜನ್ಮ ದಿನಾಚರಣೆ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆಯನ್ನು ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿ ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಶಿವಪುತ್ರಪ್ಪ ಸಂ. ಬೂತಲ, ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಅರುಣ ಕುಮಾರ ಡಿ, ಸರ್.ಎಂ. ವಿಶ್ವೇಶ್ವರಯ್ಯ ಸ್ಕೌಟ್ ಗ್ರೂಪ್‌ನ ರೋವರ್ ಸ್ಕೌಟ್ ಲೀಡರ್‌ಗಳಾದ ಶ್ರೀ ಅನಿಲ್ ಕುಮಾರ್ ಮತ್ತು ಶ್ರೀ ಇರ್ಫಾನ್ ಜಿ.ಎಸ್. ಉಪಸ್ಥಿತಿಯಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಚಿಕ್ಕಬಳ್ಳಾಪುರ ತಾಲ್ಲೂಕಿನ ಸಂತ ಜೋಸೆಫರ ಕಾನ್ವೆಂಟ್‌ನ ಗೈಡ್‌ಗಳು ಭಾಗಿಯಾಗಿದ್ದರು.





* ಸ್ಥಳೀಯ ಸಂಸ್ಥೆ ಗುಡಿಬಂಡೆ, ಇದರ ನೂತನ ಕಛೇರಿಯ ಉದ್ಘಾಟನೆ ಹಾಗು 2019–20ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಸರ್ಕಾರಿ ಉರ್ದು ಮಾದರಿ ಹಿರಿಯ ಪ್ರಾಥಮಿಕ ಶಾಲೆ ಇಲ್ಲಿ ಆಯೋಜಿಸಲಾಗಿತ್ತು. ನೂತನ ಕಚೇರಿಯನ್ನು ಸಂಸ್ಥೆಯ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾದ ಶ್ರೀಮತಿ ಡಿ.ಎನ್. ಸುಕನ್ಯಾ ರವರು ನೆರವೇರಿಸಿದರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ಬಾಲಾಜಿ, ಸರ್ಕಾರಿ ನೌಕರರ ಸಂಘದ ನಿರ್ದೇಶಕರಾದ ಶ್ರೀ ಕೃಷ್ಣಪ್ಪರವರು, ಶಿಕ್ಷಣ ಸಂಯೋಜಕರಾದ ಶ್ರೀ ಚಂದ್ರಶೇಖರ್, ಶ್ರೀ ರವೀಂದ್ರ ಗೌಡ, ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳಾದ ಶ್ರೀ ನಾಗೇಂದ್ರ ಜಿ, ಶ್ರೀಮತಿ ಶೈಲಜಾ ಜಿ.ಎಸ್. ಸಂಪನ್ಮೂಲ ವ್ಯಕ್ತಿಗಳಾದ ಶ್ರೀ ಜಯವರ್ಧನ್ ರವರು ಹಾಜರಾಗಿದ್ದರು. ನೂತನ ಕಛೇರಿಯನ್ನು ಉದ್ಘಾಟನೆ ಮಾಡಿ ಪ್ರಾಸ್ತಾವಿಕ ನುಡಿಗಳನ್ನಾಡಿದ ಶ್ರೀಮತಿ ಡಿ.ಎಂ. ಸುಕನ್ಯ ರವರು ಸಾರ್ಥಕ ಸೇವೆಯನ್ನು ಸ್ಕೌಟ್ಸ್–ಗೈಡ್ಸ್ ಸಂಸ್ಥೆಯು ನೀಡುತ್ತಾ ಬಂದಿದ್ದು ತನ್ನದೇ ಆದ ಛಾಪನ್ನು ಮೂಡಿಸಿದೆ. ಶಾಲೆಗಳಲ್ಲಿ ಘಟಕಗಳನ್ನು ತೆರೆದು, ಮಕ್ಕಳಿಗೆ ಶಿಸ್ತು, ಸಂಯಮ, ನಾಯಕತ್ವ, ದೇಶಭಕ್ತಿ, ಇತರೆ ಮೌಲ್ಯಗಳನ್ನು ಬೆಳೆಸುವುದಾಗಿದೆ ಎಂದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ ಸೈನಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ಬಾಲಾಜಿ ರವರು ಸುಮಾರು ಮೂರು ವರ್ಷಗಳಿಂದ ತನ್ನದೇ ಆದ ಕಛೇರಿಯನ್ನು ಹೊಂದಲು ಬಹಳಷ್ಟು ತೊಂದರೆಗಳಿಂದ ನೂತನ ಕಚೇರಿಯನ್ನು ಹೊಂದಿದ್ದು ಕಾರ್ಯಚಟುವಟಿಕೆಗಳನ್ನು ಚುರುಕುಗೊಳಿಸಲು ತಿಳಿಸಿದರು. ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಶ್ರೀ ನಾಗಲಿಂಗಪ್ಪ ಜಂಟಿ ಕಾರ್ಯದರ್ಶಿ ಜಿ.ಎಂ. ಭಾರತಿ, ಸಹಕಾರ್ಯದರ್ಶಿ ಶ್ರೀ ಪಿ. ವಿಜಯ್ ಕುಮಾರ್, ಶ್ರೀ ಚಂದನ್‌ಬಾಬು ಶ್ರೀಮತಿ ಗೌರಮ್ಮ, ಶ್ರೀಮತಿ ಅನುಶ್ರೀ, ಶ್ರೀ ಜಿ.ವಿ. ವೆಂಕಟೇಶ್ ಯಾಸ್ಮೀನ್ ಭರತ್. ಹಾಜರಿದ್ದರು.

* ಭಾರತ್ ಸ್ಕೌಟ್ಸ್–ಗೈಡ್ಸ್ ಕರ್ನಾಟಕ, ಸ್ಥಳೀಯ ಸಂಸ್ಥೆ ಗುಡಿಬಂಡೆ, ಇದರ ವತಿಯಿಂದ ಪಂಡಿತ ಜವಾಹರಲಾಲ್ ನೆಹರು ಜನ್ಮದಿನದ ಪ್ರಯುಕ್ತ ಸ್ಕೌಟ್ಸ್–ಗೈಡ್ಸ್‌ಗಳಿಗೆ ಮನರಂಜನಾ ಹಾಗೂ ಜಾನಪದ ಕ್ರೀಡೆಗಳನ್ನು ಕೆ.ಜಿ.ಬಿ.ವಿ. ಜೆ.ಪಿ. ನಗರ ಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೆಜಿಬಿವಿ ಶಾಲೆಯ ಮುಖ್ಯ ಶಿಕ್ಷಕಿ ಹಾಗೂ ಜಿಲ್ಲಾ ಆಯುಕ್ತೆ (ಗೈಡ್ಸ್) ಶ್ರೀಮತಿ ಮಂಜುಳಾರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ತಾಲ್ಲೂಕು ಪಂಚಾಯತ್‌ನ ನಾಮ ನಿರ್ದೇಶಿತ ಸದಸ್ಯರಾದ ಶ್ರೀ ಕೃಷ್ಣೇಗೌಡ ರವರು ಭಾಗವಹಿಸಿ ಸ್ಕೌಟ್ಸ್–ಗೈಡ್ಸ್ ಒಂದು ಸೇವಾ ಮನೋಭಾವ ಹೊಂದಿರುವ ಅಂತರಾಷ್ಟ್ರೀಯ ಸಂಸ್ಥೆ, ಚಿಕ್ಕ ವಯಸ್ಸಿನಲ್ಲೇ ಸ್ಕೌಟ್ ಚಟುವಟಿಕೆಗಳಲ್ಲಿ ಭಾಗವಹಿಸುವುದರ ಮೂಲಕ ದೇಶಪ್ರೇಮ, ಸಹಕಾರ, ಪರೋಪಕಾರ, ಶಿಸ್ತು ಮುಂತಾದ ಮೌಲ್ಯಗಳನ್ನು ಬೆಳೆಸಿಕೊಂಡು ಶಾಂತಿ ನಿರ್ಮಾಣ ಆಗಲು ಇದರ ಪಾತ್ರದೊಡ್ಡದು ಹಾಗೂ ಎಲ್ಲಾ ಶಾಲೆಗಳಲ್ಲಿ ಘಟಕ ತೆರೆಯಬೇಕು ಎಂದು ತಿಳಿಸಿದರು. ಪ್ರಾಸ್ತಾವಿಕವಾಗಿ ಮಾತನಾಡಿದ ಸ್ಕೌಟ್ಸ್ ಮಾಸ್ಟರ್ಸ್ ಶ್ರೀ ವಿಜಯ ಕುಮಾರ್ ಸ್ಕೌಟ್ ಬೆಳೆದು ಬಂದ ದಾರಿ ಹಿನ್ನಲೆ, ಮಹತ್ವ ಗುರಿ, ಪ್ರತಿಜ್ಞೆ ನಿಯಮಗಳು ಮುಂತಾದ ವಿಷಯಗಳನ್ನು ತಿಳಿಸಿದರು. ಶ್ರೀ ಚಂದನ್ ಬಾಬು, ಶ್ರೀ ವಿಜಯ್ ಕುಮಾರ್ ಶ್ರೀಮತಿ ಗೌರಮ್ಮ, ಶ್ರೀಮತಿ ಜಬೀನಾ, ಶ್ರೀಮತಿ ಭಾರತಿ ಭಾಗವಹಿಸಿದ್ದರು.

ಮತ್ತೊಬ್ಬ ಅತಿಥಿಗಳಾಗಿ ಭಾಗವಹಿಸಿದ ಶ್ರೀ ಕೆ.ವಿ. ನಾರಾಯಣಸ್ವಾಮಿ, ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು ಇಂತಹ ಸಂಸ್ಥೆಗಳು ಉತ್ತಮ ನಾಗರಿಕ ಸಮಾಜ ನಿರ್ಮಾಣವಾಗಲು ಸಹಾಯ ಮಾಡುತ್ತವೆಂದು ತಿಳಿಸಿದರು. ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಎನ್. ನಾಗಲಿಂಗಪ್ಪ ರವರು ಎಲ್ಲರನ್ನೂ ಸ್ವಾಗತಿಸಿದರು. ವಂದನೆಗಳನ್ನು ಶ್ರೀಮತಿ ಗೌರಮ್ಮ, ಗೈಡ್ ಕ್ಯಾಪ್ಟನ್ ಕೋರಿದರು.

## ಚಿಕ್ಕಮಗಳೂರು

ಅಕ್ಟೋಬರ್ 25 ರಿಂದ 26 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಕಬ್ಸ್-ಬುಲ್‌ಬುಲ್ಸ್ ಗಳಿಗೆ ಪ್ರಾವೀಣ್ಯತಾ ಪದಕ ತರಬೇತಿ ಶಿಬಿರವನ್ನು ಸ್ಕೌಟ್ಸ್-ಗೈಡ್ಸ್ ಭವನ ಚಿಕ್ಕಮಗಳೂರು ಇಲ್ಲಿ ಆಯೋಜಿಸಲಾಗಿತ್ತು. ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ.ಎನ್. ಮಹೇಶ್ ವಹಿಸಿ ಮಾತನಾಡಿದರು. ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಆದ್ಯತೆ ನೀಡುತ್ತಿದ್ದು ನೈತಿಕ ಮೌಲ್ಯ ಹಾಗೂ ಪರಿಸರದೊಂದಿಗಿನ ಮಕ್ಕಳ ಒಡನಾಟ ಕಲ್ಪಿಸುವುದರೊಂದಿಗೆ ಹೊರಾಂಗಣ ಶಿಕ್ಷಣಕ್ಕೆ ಆದ್ಯತೆ ನಮ್ಮ ಮುಖ್ಯ ಗುರಿಯಾಗಿದೆ ಎಂದರು.




ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಡಿ.ಎಸ್. ಮಮತಾ ಮಾತನಾಡುತ್ತಾ ಮಕ್ಕಳು ಉತ್ತಮ ಗುರಿಯನ್ನು ಹೊಂದಲು ಕನಸು ಕಾಣಬೇಕು. ನಂತರ ಅದನ್ನು ಸಾಕಾರಗೊಳಿಸಲು ಸರ್ವಪ್ರಯತ್ನ ಮಾಡಬೇಕೆಂದೂ, ಅದು ನಮ್ಮ ರಾಷ್ಟ್ರಪತಿ ಶ್ರೀ ಅಬ್ದುಲ್ ಕಲಾಂ ರವರ ಆದ್ಯತೆಯಾಗಿತ್ತೆಂದರು.

ಕಾರ್ಯಕ್ರಮದಲ್ಲಿ ಜಿಲ್ಲಾ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಸಂಧ್ಯಾರಾಣಿ ಜಿಲ್ಲಾ ಸಂಘಟಕರಾದ ಶ್ರೀಕಿರಣ್ ಕುಮಾರ್, ಶ್ರೀ ನವೀನ್ ಕುಮಾರ್, ಶ್ರೀಮತಿ ಗೀತಾ ಹಾಗೂ ಶ್ರೀ ಪ್ರಸನ್ನ, ಶ್ರೀಮತಿ ಅನುಷಾರವರು ಹಾಜರಿದ್ದರು. ಶ್ರೀಮತಿ ಸಂಧ್ಯಾರಾಣಿ ಸ್ವಾಗತಿಸಿದರು. ಶ್ರೀ ನವೀನ್ ಕುಮಾರ್ ವಂದಿಸಿದರು.

* ನವೆಂಬರ್ 7 ರಿಂದ 9ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಜಿಲ್ಲಾ ಪಂಚಾಯಿತಿ ವತಿಯಿಂದ ಆಯೋಜಿಸಲಾಗಿದ್ದ ರಾಜ್ಯಮಟ್ಟದ ಕುಸ್ತಿಪಂದ್ಯಾವಳಿಯಲ್ಲಿ 25 ಜಿಲ್ಲೆಗಳಿಂದ ಸುಮಾರು 1000ಕ್ಕೂ ಹೆಚ್ಚು ಕುಸ್ತಿಪಟುಗಳು ಭಾಗವಹಿಸಿದ್ದರು.

ಈ ಕಾರ್ಯಕ್ರಮದಲ್ಲಿ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಬೆಳಗ್ಗೆ ಮಧ್ಯಾಹ್ನ ರಾತ್ರಿ ಪಾಳಯದಲ್ಲಿ ಆಹಾರ ವಿತರಣೆ, ಕುಡಿಯುವ ನೀರು ಸರಬರಾಜು ವಿತರಣೆ ಮತ್ತು ಸ್ವಚ್ಛತೆ ಇನ್ನು ಮುಂತಾದ



ರೀತಿಯಲ್ಲಿ ಭಾಗವಹಿಸಿ ಸೇವೆಯನ್ನು ಸಲ್ಲಿಸಿದ್ದಾರೆ. ಗೈಡ್ ಕ್ಯಾಪ್ಟನ್ ಶ್ರೀಮತಿ ಪ್ರತಿಮಾ ಮತ್ತು ಜಿಲ್ಲಾ ಸಂಚಾಲಕರು ಶ್ರೀ ನವೀನ್ ಕುಮಾರ್ ಇವರುಗಳು ನೇತೃತ್ವ ವಹಿಸಿದ್ದರು.

* ಅಕ್ಟೋಬರ್ 12ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಚಿಕ್ಕಮಗಳೂರು, ಇವರ ವತಿಯಿಂದ ಐ.ಡಿ.ಎಸ್.ಜಿ. ಕಾಲೇಜಿನ ರೋವರ್-ರೇಂಜರ್ ಘಟಕದಿಂದ ವಾರ್ಷಿಕ ಚಟುವಟಿಕೆ ಉದ್ಘಾಟನಾ ಕಾರ್ಯಕ್ರಮ ಮತ್ತು ದೀಕ್ಷಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಸಮಾರಂಭವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿ ರವರು ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ನಟರಾಜರವರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಶ್ರೀಮತಿ ಮಮತಾ, ಜಿಲ್ಲಾ ಆಯುಕ್ತರು(ಗೈ) ಶ್ರೀಮತಿ ಸಂಧ್ಯಾರಾಣಿ ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಶ್ರೀ ನವೀನ್ ಕುಮಾರ್ ಮಾಜಿ ಜಿಲ್ಲಾ ಸಂಚಾಲಕರು, ಶ್ರೀಮತಿ ಸುಹಾನಸುಲ್ತಾನ್ ಜಿಲ್ಲಾ ಲೀಡರ್ಸ್ ಸಂಯೋಜಕರು. ಕಾಲೇಜಿನ ರೋವರ್ಸ್ ಸ್ಕೌಟ್ ಲೀಡರ್ ಶ್ರೀ ಯೋಗೇಶ್, ರೇಂಜರ್ ಲೀಡರ್ ಶ್ರೀಮತಿ ಗೀತಾಂಜಲಿ ಹಾಗೂ ರೋವರ್ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.



* ಅಕ್ಟೋಬರ್ 26ರಂದು ಜಿಲ್ಲಾ ಸಂಸ್ಥೆವತಿಯಿಂದ ವೃಕ್ಷಮಣಿಧಾರರ ಸಮಾವೇಶವು ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ನಡೆಯಿತು. ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿದ ಶ್ರೀ ಜಯಣ್ಣ, ಮಾನ್ಯ ಉಪ ನಿರ್ದೇಶಕರು (ಆಡಳಿತ) ಚಿಕ್ಕಮಗಳೂರು ಇವರು ಶಿಕ್ಷಣ ಇಲಾಖೆಯಿಂದ ಸಂಪೂರ್ಣವಾಗಿ ಸಹಕಾರ ನೀಡಿ ಶಾಲೆಗಳಲ್ಲಿ ಸ್ಕೌಟ್ಸ್ - ಗೈಡ್ಸ್ ಘಟಕಗಳನ್ನು ತೆರೆಯಲು ಸೂಚಿಸಲಾಗುವುದು. ಶಿಕ್ಷಕಿಯರನ್ನು ನಿಯೋಜಿಸಲು ಸಹಕಾರ ನೀಡುತ್ತೇವೆ, ಶಿಕ್ಷಕರುಗಳಿಗೆ ತಮ್ಮನ್ನು ಉತ್ತಮ ನಾಯಕರನ್ನಾಗಿ ರೂಪಿಸಿಕೊಳ್ಳಲು ಇಂತಹ ತರಬೇತಿ ಮತ್ತು ಸಮಾವೇಶಗಳು

ಪ್ರಮುಖವಾಗಿವೆ. ಎಂದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಮ್. ಎನ್. ಷಡಕ್ಷರಿ ಅವರು ಮಾತನಾಡುತ್ತಾ ಶಿಕ್ಷಕರುಗಳು ಮುಂದುವರೆದ ತರಬೇತಿಗಳಲ್ಲಿ ಭಾಗಿಯಾಗಬೇಕು, ಜಿಲ್ಲಾಮಟ್ಟದಲ್ಲಿ ಶಿಬಿರಗಳಲ್ಲಿ ಒಂದು ಉತ್ತಮ ತಂಡವನ್ನು ಹೊಂದಲು ವೃಕ್ಷಮಣಿಧಾರರ ಸಮಾವೇಶವು ಸಹಕಾರಿಯಾಗಿದೆ. ಜಿಲ್ಲಾ ಮಟ್ಟದಲ್ಲಿ ಶಿಬಿರಗಳಿಗೆ ತರಬೇತಿ ಹೊಂದಿದ ಶಿಕ್ಷಕರು ಭಾಗಿಯಾಗಬೇಕು ಜಿಲ್ಲಾ ಮಟ್ಟದ ಶಿಬಿರಗಳಲ್ಲಿ ತರಬೇತಿ ಹೊಂದಿದ ಶಿಕ್ಷಕರು ಭಾಗಿಯಾಗಬೇಕೆಂದು ನುಡಿದರು.

ಸಮಾವೇಶದಲ್ಲಿ ಜಿಲ್ಲಾ ಪ್ರೌಢಶಾಲಾ ಮತ್ತು ಪದವಿ ಪೂರ್ವ ಕಾಲೇಜು ಮುಖ್ಯೋಪಾಧ್ಯಾಯರ ಸಂಘದ ಅಧ್ಯಕ್ಷರಾದ ಶ್ರೀ ಚಂದ್ರೇಗೌಡ್ರು, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಸಂಧ್ಯಾರಾಣಿ (ಸ್ಕೌಟ್ಸ್) ಜಿಲ್ಲಾ ತರಬೇತಿ ಆಯುಕ್ತರಾದ ಸಿಸ್ಟರ್ ಸಿಂಥಿಯಾ (ಗೈಡ್ಸ್) ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀನೀಲಕಂಠಚಾರ್, ಜಿಲ್ಲಾ ಸಂಘಟಕರಾದ ಶ್ರೀ ಕಿರಣ್ ಕುಮಾರ್ ಶ್ರೀ ನವೀನ್ ಕುಮಾರ್ ರವರು ಹಾಜರಿದ್ದರು. ಶ್ರೀ ನೀಲಕಂಠಚಾರ್ ಸ್ವಾಗತಿಸಿದರು ಶ್ರೀ ನವೀನ್ ಕುಮಾರ್ ವಂದಿಸಿದರು.

* ವಿದ್ಯಾರ್ಥಿ ದೆಸೆಯಿಂದಲೇ ಸೇವಾ ಮನೋಭಾವ ಬೆಳೆಸಿಕೊಂಡು ಸಮಾಜಸೇವೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದರ ಮೂಲಕ ದೃಢ ಸಮಾಜ ನಿರ್ಮಾಣಕ್ಕೆ ತಮ್ಮ ಕರ್ತವ್ಯವೇನು ಎಂದು ಅರಿವು ಮಾಡಿಕೊಳ್ಳುವ ದಿಸೆಯಲ್ಲಿ ಸ್ಕೌಟ್ಸ್-ಗೈಡ್ಸ್ ಚಳುವಳಿಯ ಶ್ಲಾಘನೀಯ ಕೆಲಸ ಮಾಡುತ್ತಿದೆ ಎಂದು ತರೀಕೆರೆ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಶಿವರಾಜು ನುಡಿದರು.

ಶಾಸಕರ ಮಾದರಿ ಪ್ರೌಢಶಾಲೆಯಲ್ಲಿ ನಡೆದ ತರೀಕೆರೆ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ವಾರ್ಷಿಕ ಪ್ರಗತಿ ಪರಿಶೀಲನಾ ಮತ್ತು ಪುನಶ್ಚೇತನ ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎಸ್. ಷಡಕ್ಷರಿ ಮಾತನಾಡಿ ಯುವಜನರು ಎಲೆಕ್ಟ್ರಾನಿಕ್ ಮಾಧ್ಯಮಗಳಿಗೆ ಮಾರುಹೋಗುತ್ತಿರುವುದರಿಂದ ಅವರ ದೈಹಿಕ ಶ್ರಮತೆ ಹಾಗೂ ಸವಾಲು ಎದುರಿಸುವ ಶಕ್ತಿ ಕ್ಷೀಣಿಸುತ್ತಿರುದ್ದು ಪರಿಸರದ ಒಡನಾಟವನ್ನು ಪ್ರೋತ್ಸಾಹಿಸುವ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಲ್ಲಿ ಹೆಚ್ಚು ತೊಡಗಿಸುವುದರ ಮೂಲಕ ಪ್ರಕೃತಿಯ ಸೋಜಿಗಗಳನ್ನು ಅರ್ಥಮಾಡಿಕೊಂಡು ಆನಂದಿಸುವುದರೊಂದಿಗೆ ಪರಿಸರ ಸಂರಕ್ಷಣೆಗೆ ಅವರನ್ನು ಪ್ರೇರೇಪಿಸುವ ಕಾರ್ಯವಾಗಬೇಕಾಗಿದೆ" ಎಂದರು.



* ಸ್ಕೌಟ್ಸ್-ಗೈಡ್ಸ್ ಸಂಸ್ಥೆ ವತಿಯಿಂದ ಸ್ಕೌಟ್ಸ್-ಗೈಡ್ಸ್ ಸಪ್ತಾಹದ ಅಂಗವಾಗಿ ಧ್ವಜಚೀಟಿ ಬಿಡುಗಡೆ ಕಾರ್ಯಕ್ರಮವು ಜಿಲ್ಲಾಧಿಕಾರಿಗಳವರ ಕಛೇರಿಯಲ್ಲಿ ನಡೆಯಿತು.

ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಸಂಸ್ಥೆ ಅಧ್ಯಕ್ಷರಾದ ಡಾ|| ಬಗಾದಿ ಗೌತಮ್ ಧ್ವಜಚೀಟಿ ಬಿಡುಗಡೆ ಮಾಡಿ ಮಾತನಾಡುತ್ತಾ ಜಾತಿ-ಮತ-ಧರ್ಮವನ್ನು ಸಮ್ಮಿಲನಗೊಳಿಸಿ ಭಾವೈಕ್ಯತೆ ಹಾಗೂ ಭ್ರಾತೃತ್ವದ ಸಂದೇಶವನ್ನು ಜಗತ್ತಿನಾದ್ಯಂತ ಸಾರುವುದೇ ಸ್ಕೌಟ್ಸ್ ಸಂಸ್ಥೆಯ ಮುಖ್ಯ ಗುರಿಯಾಗಿದ್ದು ಮಾನವೀಯತೆ ಹಾಗೂ ರಾಷ್ಟ್ರ ಕಟ್ಟುವ ಭಾವನೆ ಬೆಸೆಯುವ ಕಾರ್ಯವಾಗಿದೆಯೆಂದು ಬಣ್ಣಿಸಿದರು.

ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ. ಎನ್. ಮಹೇಶ್ ಮಾತನಾಡುತ್ತಾ 1950ರಲ್ಲಿ ಹಿಂದುಸ್ಥಾನ ಸ್ಕೌಟ್ಸ್ ಮತ್ತು ಭಾರತೀಯ ಸ್ಕೌಟ್ಸ್ ಸಂಸ್ಥೆ ಒಂದಾದ ದಿನವನ್ನು ಸಾಂಸ್ಥಿಕದಿನವನ್ನಾಗಿ ಆಚರಿಸುತ್ತಿದ್ದು ಒಂದು ವಾರ ನಡೆಯುವ ಕಾರ್ಯಕ್ರಮದಲ್ಲಿ ಜಿಲ್ಲೆಯ ಎಲ್ಲಾ ಶಾಲೆಗಳು ಭಾಗವಹಿಸಲಿದ್ದು ವಿವಿಧ ರೀತಿಯ ಕಾರ್ಯಕ್ರಮಗಳು ಶಾಲಾ ಹಂತದಲ್ಲಿ ನಡೆಯಲಿವೆ ಎಂದರು.

ಕಾರ್ಯಕ್ರಮದಲ್ಲಿ ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಡಿ.ಎಸ್. ಮಮತ, ಕಾರ್ಯದರ್ಶಿ ಶ್ರೀ ಫನಿರಾಜ್, ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀಮತಿ ಭಾರತಿ ಶಿವರುದ್ರಪ್ಪ, ಹಿರಿಯ ಸ್ಕೌಟರ್ ಶ್ರೀ ನೀಲಕಂಠಚಾರ್, ಜಿಲ್ಲಾ ಸಂಘಟಕರಾದ ಶ್ರೀ ಕಿರಣ್, ಶ್ರೀ ನವೀನ್ ಹಾಗೂ ವಿವಿಧ ಶಾಲೆಯ ಮಕ್ಕಳು ಭಾಗವಹಿಸಿದ್ದರು.

### ಶಿವಮೊಗ್ಗ

ನವೆಂಬರ್ 11ರಂದು ನ್ಯಾಮತಿ ತಾ. ದೊಡ್ಡೇರಿಯ ಜ್ಞಾನವಾಹಿತಿ ಶಾಲೆಯಲ್ಲಿ ಶಿವಮೊಗ್ಗದ 'ಶಂಕರ ಕಣ್ಣಿನ ಆಸ್ಪತ್ರೆ ಹಾಗೂ ಜ್ಞಾನವಾಹಿತಿ ವಿದ್ಯಾ ಸಂಸ್ಥೆಯ' ಸಹಯೋಗದಲ್ಲಿ ಕಣ್ಣಿನತಪಾಸಣೆ ಕಾರ್ಯಕ್ರಮವನ್ನು ಶಾಲಾ ಆವರಣದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ 32 ಸ್ಕೌಟ್ಸ್‌ಗಳು ಭಾಗವಹಿಸಿ, ಕಣ್ಣಿನ ತಪಾಸಣೆಗೆ ಬರುತ್ತಿದ್ದ ನಾಗರೀಕರಿಗೆ ತಪಾಸಣೆ ಕಾರ್ಯವನ್ನು ಕೈಗೊಳ್ಳಲು ಸಹಕರಿಸಿರುತ್ತಾರೆ. ಶಾಲೆಯ ಆಡಳಿತ ಮಂಡಳಿ ಪದಾಧಿಕಾರಿಗಳು ಮತ್ತು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.



## ದಕ್ಷಿಣ ಕನ್ನಡ

ಅಕ್ಟೋಬರ್ 01 ರಂದು ಎಸ್.ಎಸ್.ಪಿ.ಯು ಕಾಲೇಜ್ ಸುಬ್ರಹ್ಮಣ್ಯದ ರೋವರ್ಸ್-ರೆಂಜರ್ಸ್ ಘಟಕದ ವತಿಯಿಂದ 150ನೇ ಗಾಂಧಿ ಜಯಂತಿ ದಿನಾಚರಣೆ ಹಾಗು ಸುಬ್ರಹ್ಮಣ್ಯ ದೇವಸ್ಥಾನಕ್ಕೆ ನೂತನವಾಗಿ ನಿರ್ಮಿಸಲ್ಪಟ್ಟ ಬ್ರಹ್ಮರಥ ಬರುವ ನಿಟ್ಟಿನಲ್ಲಿ ಕೈಕಂಬದಿಂದ ಪ್ರಾರಂಭವಾಗಿ ಸುಬ್ರಹ್ಮಣ್ಯ ದೇವಸ್ಥಾನದವರೆಗೆ ಬೃಹತ್ ಸ್ವಚ್ಛತಾ ಕಾರ್ಯಕ್ರಮ ನಡೆಸಿದರು. ನಾಯಕತ್ವವನ್ನು ರೋವರ್ ಸ್ಕೌಟ್ ಲೀಡರ್ ಶ್ರೀ ಪ್ರವೀಣ್, ರೇಂಜರ್ ಲೀಡರ್ ಶ್ರೀಮತಿ ಸವಿತಾರವರು ವಹಿಸಿದ್ದರು.

* ಅಕ್ಟೋಬರ್ 2 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸರಕಾರಿ ಪ್ರೌಢಶಾಲೆ, ಬೊಕ್ಕಪಟ್ನ ಇವರ ಸಹಭಾಗಿತ್ವದಲ್ಲಿ 150ನೇ ಗಾಂಧಿ ಜಯಂತಿಯನ್ನು ಸರ್ವಧರ್ಮ ಪ್ರಾರ್ಥನೆಯೊಂದಿಗೆ ನಡೆಸಲಾಯಿತು. ತದನಂತರ ಬೊಕ್ಕಪಟ್ನದ ಸುತ್ತಮುತ್ತ ಪರಿಸರದಲ್ಲಿ ಸ್ವಚ್ಛತೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು.

* ಅಕ್ಟೋಬರ್ 4 ರಂದು ಹೊಸದಾಗಿ ಸಹಾಯಕ ಜಿಲ್ಲಾ ಆಯುಕ್ತರುಗಳಾಗಿ ಸೇರ್ಪಡೆಗೊಂಡವರಿಗೆ ಮಾಹಿತಿ ಕಾರ್ಯಾಗಾರ ಜಿಲ್ಲಾ ಸ್ಕೌಟ್-ಗೈಡ್ ಭವನದಲ್ಲಿ ನಡೆಯಿತು. ಪೂರ್ವಾಹ್ನ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಎನ್.ಜಿ. ಮೋಹನ್, ಕಾರ್ಯಾಗಾರ ಉದ್ಘಾಟಿಸಿದರು. ಸಹ ಜಿಲ್ಲಾ ಆಯುಕ್ತರುಗಳು ಸ್ಕೌಟ್-ಗೈಡ್ ಚಳವಳಿಗೆ ಸಹಕಾರ ನೀಡಬೇಕೆಂದು ತಿಳಿಸುತ್ತಾ ಜಿಲ್ಲಾ ಸಂಸ್ಥೆಯ ವಾರ್ಷಿಕ ಕಾರ್ಯಕ್ರಮಗಳನ್ನು ವಿವರಿಸಿದರು. ಕಾರ್ಯಾಗಾರದಲ್ಲಿ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌ) ಶ್ರೀ ಪ್ರತೀಮ್ ಕುಮಾರ್ ಹಾಗೂ ಜಿಲ್ಲಾ ಕಾರ್ಯದರ್ಶಿ (ಪ್ರ) ಶ್ರೀ ಎಂ.ಜಿ. ಕಜೆ ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಅಪರಾಹ್ನ ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀ ರಾಮಶೇಷ ಶೆಟ್ಟಿ ಸಮಾರೋಪ ಭಾಷಣ ಗೈದರು. ಶ್ರೀ ಪ್ರತಿಮ್ ಕುಮಾರ್ ಪ್ರಾರಂಭದಲ್ಲಿ ಎಲ್ಲರನ್ನು ಸ್ವಾಗತಿಸಿ ಕೊನೆಯಲ್ಲಿ ವಂದಿಸಿದರು. ಕಾರ್ಯಾಗಾರದಲ್ಲಿ ಒಟ್ಟು 10 ಮಂದಿ ಹೊಸ ಸಹಾಯಕ ಜಿಲ್ಲಾ ಆಯುಕ್ತರುಗಳು ಭಾಗವಹಿಸಿದ್ದರು.

* ಅಕ್ಟೋಬರ್ 3 ರಿಂದ 5 ರ ವರೆಗೆ ಎಸ್.ಡಿ.ಎಂ. ಆಂಗ್ಲ ಮಾಧ್ಯಮ ಶಾಲೆ ಬೆಳ್ತಂಗಡಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಬೆಳ್ತಂಗಡಿ ಇವರ ಸಹಭಾಗಿತ್ವದಲ್ಲಿ ಜಿಲ್ಲಾ ಮಟ್ಟದ ರೇಂಜರ್ಸ್ ಪ್ರೇರಣಾ ತರಬೇತಿ ಶಿಬಿರವನ್ನು ಆಯೋಜಿಸಲಾಯಿತು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಸೋನಿಯಾ ವರ್ಮ ಟ್ರಸ್ಟೀ ಎಸ್.ಡಿ.ಎಂ. ಶಿಕ್ಷಣ ಸಂಸ್ಥೆ ಇವರು ದೀಪ ಬೆಳಗಿಸಿ ಮಾತನಾಡಿದರು. ಕಾರ್ಯಕ್ರಮದ ಅಧ್ಯಕ್ಷತೆ ಸ್ಥಾನವನ್ನು ಡಾ. ಎನ್.ಜಿ. ಮೋಹನ್, ಜಿ. ಮು. ಆಯುಕ್ತರು ವಹಿಸಿದ್ದರು. ಅತಿಥಿಗಳಾಗಿ ಶ್ರೀ ಸತೀಶ್, ಕ್ಷೇತ್ರ ಶಿಕ್ಷಣಾಧಿಕಾರಿ ಬೆಳ್ತಂಗಡಿ, ಶ್ರೀಮತಿ ಅಮ್ಮಿ .ಎ, ಕ್ಷೇತ್ರ ಆರೋಗ್ಯ ಶಿಕ್ಷಣಾಧಿಕಾರಿ ಬೆಳ್ತಂಗಡಿ, ಶ್ರೀ ವಿನಯಚಂದ್ರ, ಶ್ರೀಮತಿ ಜೆಸಿಂತಾ ಸಹಶಿಕ್ಷಕಿ, ಶ್ರೀ ಪ್ರಿತೇಶ್ ಜಿಲ್ಲಾ ಯುವ ಅಧ್ಯಕ್ಷರು, ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಹೆಣ್ಣುಮಕ್ಕಳ ಜೀವನ ಕೌಶಲ ವಿಷಯದ ಬಗ್ಗೆ ಶ್ರೀಮತಿ ಮೇರಿ, ಶೆಣೈ ನಿವೃತ್ತ ಶಿಕ್ಷಕಿ, ಇವರು ಅರಿವನ್ನು ಮೂಡಿಸಿದರು. ಮಹಿಳಾ ಸಬಲೀಕರಣ ಮತ್ತು ಶಿಕ್ಷಣದ ಕುರಿತಾಗಿ ಶ್ರೀಮತಿ ಲಲಿತಾ ಶಿಕ್ಷಣ ಸಂಯೋಜಕರು, ಬೆಳ್ತಂಗಡಿ ಇವರು ಅರಿವು ಮೂಡಿಸಿದರು. ಶಿಬಿರಾಗ್ನಿಗೆ ಉದ್ಘಾಟಕರಾಗಿ ಲ್ಯಾನ್ಸ್ ಪ್ರಭಾ ವೆಂಕಟೇಶ್ ಭಟ್, ಲ್ಯಾನ್ಸ್ ಕ್ಲಬ್ ಬೆಳ್ತಂಗಡಿ ಇವರು ನೆರವೇರಿಸಿಕೊಟ್ಟರು. ನಗರ ಮೆರವಣಿಗೆ ಕಾರ್ಯಕ್ರಮವನ್ನು ಶ್ರೀಮತಿ ಸೌಮ್ಯಲತಾ ಸಂತೋಷ್ ಕುಮಾರ್, ಅಬಕಾರಿ ವೃತ್ತ ನಿರೀಕ್ಷಕರು ಬೆಳ್ತಂಗಡಿ ಇವರು ಉದ್ಘಾಟಿಸಿದರು. ಶ್ರೀಮತಿ ಮನೋರಮ ನಿರ್ದೇಶಕರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಸಿರಿ ಗ್ರಾಮೋದ್ಯೋಗ ಬೆಳ್ತಂಗಡಿ, ಇವರು ಮಹಿಳೆ ಮತ್ತು ಸಮಾಜ ಕುರಿತು ಮಾಹಿತಿಯನ್ನು ನೀಡಿದರು. ಸಮಾರೋಪ ಸಮಾರಂಭದ ಅಧ್ಯಕ್ಷರಾಗಿ ಶ್ರೀ ರಮಾನಂದ ಸಾಲ್ಯಾನ್, ಸ್ಥಳೀಯ ಸಂಸ್ಥೆ, ಬೆಳ್ತಂಗಡಿ ಇವರು ಉಪಸ್ಥಿತರಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಬಿ. ಸೋಮಶೇಖರ್ ಶೆಟ್ಟಿ, ಕ್ಷೇಮಪಾಲನಾ ಅಧಿಕಾರಿ, ಉಜಿರೆ ಇವರು ಪಾಲ್ಗೊಂಡಿದ್ದರು. ಶ್ರೀಮತಿ ಲೋಕೇಶ್ವರಿ ವಿನಯಚಂದ್ರ, ಎಡಿಸಿ ಬೆಳ್ತಂಗಡಿ, ಶ್ರೀಮತಿ ಲಲಿತ ಶಿಕ್ಷಣ ಸಂಯೋಜಕರು ಬೆಳ್ತಂಗಡಿ, ಶ್ರೀಮತಿ ಪ್ರಮೀಳಾ ಕಾರ್ಯದರ್ಶಿ ಬೆಳ್ತಂಗಡಿ ಶ್ರೀ ಭರತ್‌ರಾಜ್ ಕೆ. ಜಿಲ್ಲಾ ಸಂಘಟಕರು, ಶ್ರೀ ವಾಲ್ಟರ್ ಜೆ. ಪಿಂಟೋ, ಎಡಿಸಿ (ಸ್ಕೌಟ್) ಶ್ರೀಮತಿ ಸಂಧ್ಯಾ ರೇಂಜರ್ ಲೀಡರ್ ಇವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

* ಅಕ್ಟೋಬರ್ 12 ರಿಂದ 15ರ ವರೆಗೆ ಡಾ. ಜಿ.ಎಂ. ಪೈ ಸಭಾಭವನ ಮಂಗಳೂರಿನಲ್ಲಿ 12ನೇ ರಾಜ್ಯಮಟ್ಟದ ಅಂಚೇ ಚೀಟಿ ಪ್ರದರ್ಶನ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದಲ್ಲಿ ಬೆಸೆಂಟ್ ಮಹಿಳಾ ಪದವಿ ಪೂರ್ವ ಕಾಲೇಜು. ಮಂಗಳೂರಿನಿಂದ 9 ರೇಂಜರ್ಸ್‌ಗಳು ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು. ರೇಂಜರ್ ಲೀಡರ್ ಶ್ರೀಮತಿ ಲತಾರವರು ನಾಯಕತ್ವ ವಹಿಸಿಕೊಂಡಿದ್ದರು.



* ಸರಕಾರಿ ಪ್ರಥಮ ದರ್ಜೆ ಕಾಲೇಜ್, ಬಂಟ್ವಾಳದಲ್ಲಿ ಪ್ರಥಮ ವರ್ಷದ ರೋವರ್ಸ್-ರೇಂಜರ್ಸ್ ವಿದ್ಯಾರ್ಥಿಗಳಿಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಬಗ್ಗೆ ಮಾಹಿತಿ ನೀಡುವ ಕಾರ್ಯಕ್ರಮವನ್ನು ಆಯೋಜಿಸಲಾಯಿತು. ಶ್ರೀ ಪ್ರತೀಮ್ ಕುಮಾರ್ ಎಲ್.ಟಿ. ಇವರು ತರಬೇತಿ ನೀಡುವ ಮೂಲಕ ಕಾರ್ಯಕ್ರಮವನ್ನು ಯಶಸ್ಸುಗೊಳಿಸಿದರು. ಕಾರ್ಯಕ್ರಮದಲ್ಲಿ ಡಾ. ಗಿರೀಶ್ ಭಟ್, ಶ್ರೀ ಬಾಲಸುಬ್ರಹ್ಮಣ್ಯ ಪಿ.ಎಸ್. ಭಾಗವಹಿಸಿ ಕಾರ್ಯಕ್ರಮ ನಿರೂಪಿಸಿದರು. ಕು॥ ಸುಶ್ಮಿತ ಕಾರ್ಯಕ್ರಮ ನಿರೂಪಿಸಿದರು. ಬಾಲಸುಬ್ರಹ್ಮಣ್ಯ ಪಿ.ಎಸ್. ವಂದನಾರ್ಪಣೆ ಮಾಡಿದರು.




* ಗುರುಹಿರಿಯರನ್ನು ಗೌರವಿಸುವುದು. ಕಷ್ಟದಲ್ಲಿರುವವರಿಗೆ ಸಹಾಯ ಮಾಡುವುದು. ಇದೇ ಮೊದಲಾದ ಸಣ್ಣ ಸಣ್ಣ ಗುಣಗಳಿಂದಲೇ ನಮ್ಮ ವ್ಯಕ್ತಿತ್ವ ಬೆಳೆಯುವುದು ಇಂಥ ಮೌಲ್ಯಗಳನ್ನು ಅಳವಡಿಸಿಕೊಳ್ಳುವ ಮೂಲಕ ಬದುಕಿನಲ್ಲಿ ಶಿಸ್ತನ್ನು ರೂಢಿಸಿಕೊಳ್ಳುವುದನ್ನು ರೇಂಜರ್ ಮತ್ತು ರೋವರ್ಸ್ ಚಟುವಟಿಕೆಗಳು ಕಲಿಸುತ್ತವೆ ಎಂದು ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಪ್ರತಿಮ್ ಕುಮಾರ್ ಹೇಳಿದರು. ಅವರು ಬೆಟ್ಟಂಪಾಡಿಯ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್-ರೇಂಜರ್ಸ್ ಘಟಕ ಪ್ರಸ್ತುತ ಶೈಕ್ಷಣಿಕ ವರ್ಷದ ಚಟುವಟಿಕೆಗಳ ಉದ್ಘಾಟನೆ ಸಮಾರಂಭದಲ್ಲಿ ಹೇಳಿದರು.

* ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಜಡೆಕಲ್ಲು ಇಲ್ಲಿನ ರೋವರ್ಸ್-ರೇಂಜರ್ಸ್ ಘಟಕದ ವತಿಯಿಂದ ಒಂದು ದಿನದ ತರಬೇತಿಯನ್ನು ಆಯೋಜಿಸಲಾಯಿತು. ಮುಖ್ಯ ತರಬೇತುದಾರರಾಗಿ ಮಂಗಳೂರಿನ ಶ್ರೀ ಪ್ರತಿಮ್ ಕುಮಾರ್ ಭಾಗವಹಿಸಿ ವಿದ್ಯಾರ್ಥಿಗಳಲ್ಲಿ ಶಿಸ್ತು, ಸಹನೆ, ಸೇವೆ ಮತ್ತು ಪ್ರಾಕೃತಿಕ ವಿಕೋಪಗಳಲ್ಲಿ ತಮ್ಮ ಸೇವೆಯನ್ನು ನೀಡುವ ಕುರಿತು ಮಾಹಿತಿ ನೀಡಿದರು. ಶಿಬಿರದಲ್ಲಿ ಸರಕಾರಿ ಮಹಿಳಾ ಕಾಲೇಜಿನ 45 ವಿದ್ಯಾರ್ಥಿಗಳು ಸಹಿತ ಒಟ್ಟು 89 ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು. ಕಾಲೇಜಿನ ರೋವರ್ಸ್ ಲೀಡರ್. ಶ್ರೀ ಸೇಸಪ್ಪ, ರೇಂಜರ್ಸ್ ಲೀಡರ್ ಸಿನಿಮಾ ಜಿ.ಕೆ. ಮತ್ತು ಮಹಿಳಾ ಕಾಲೇಜಿನ ರೇಂಜರ್ಸ್ ಲೀಡರ್, ಶ್ರೀಮತಿ ದೇವಕಿ ಮೊದಲಾದವರು ಉಪಸ್ಥಿತರಿದ್ದರು.

* ಪ್ರತಿಯೊಬ್ಬ ವಿದ್ಯಾರ್ಥಿಯೂ ದೇಶದ ಆಸ್ತಿ. ಅಂತೆಯೇ ವಿದ್ಯಾರ್ಥಿಗಳು ಕಲಿಕೆಯ ಹಂತದಿಂದಲೇ ಜೀವನದಲ್ಲಿ ಇದನ್ನು ಮೈಗೂಡಿಸಿಕೊಂಡು ಮಾನವೀಯ ಗುಣಗಳನ್ನು ಅಳವಡಿಸಿಕೊಂಡು ಶ್ರೇಷ್ಠ ವ್ಯಕ್ತಿಗಳಾಗಬೇಕು ಆದ್ದರಿಂದ ವಿದ್ಯಾರ್ಥಿಗಳು "ಉತ್ತಮ ವ್ಯಕ್ತಿತ್ವ ವಿಕಸನಕ್ಕೆ ಸ್ಕೌಟ್ಸ್-ಗೈಡ್ಸ್‌ಗೆ ಸೇರ್ಪಡೆಗೊಳ್ಳಬೇಕು." ಎಂದು ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಪ್ರತಿಮ್ ಕುಮಾರ್ ವಿದ್ಯಾರ್ಥಿನಿಯರಿಗೆ ಕರೆ ನೀಡಿದರು. ಅವರು ಬಲ್ಮಠದ ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜಿನ ರೇಂಜರ್ಸ್ ಘಟಕದವರು ಆಯೋಜಿಸಿದ್ದ 'ಓರಿಯಂಟೇಶನ್ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಪಾಲ್ಗೊಂಡು ಪ್ರಥಮ ವರ್ಷದ ವಿದ್ಯಾರ್ಥಿನಿಯರಿಗೆ ರೇಂಜರ್ಸ್‌ನ ಸಮವಸ್ತ್ರವನ್ನು ವಿತರಿಸಿ ಮಾತನಾಡಿದರು. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಜಗದೀಶ ಬಾಲ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಶೈಕ್ಷಣಿಕ ಸಾಲಿನ ರೇಂಜರ್ಸ್ ಘಟಕದ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯಲಿ ಎಂದು ಶುಭ ಹಾರೈಸಿದರು. ರೇಂಜರ್ಸ್ ಘಟಕದ ಲೀಡರ್ ಶ್ರೀಮತಿ ಸುಮತಿ ಕಾರ್ಯಕ್ರಮವನ್ನು ಆಯೋಜಿಸಿ ವಿದ್ಯಾರ್ಥಿನಿಯರಿಗೆ ಮಾರ್ಗದರ್ಶನ ಮಾಡಿದರು. ವಾಣಿಜ್ಯ ವಿಭಾಗದ ಪ್ರಾಧ್ಯಾಪಕರಾದ ಪ್ರೊ. ಬಿಂದು ಟಿ. ಮತ್ತು ಪ್ರೊ. ದಿವ್ಯಾ ಎಂ.ಪಿ. ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ರೇಂಜರ್ಸ್ ವಿದ್ಯಾರ್ಥಿನಿಯರು ಪ್ರಾರ್ಥಿಸಿದರು. ಕು. ಪದ್ಮಾವತಿ ಸ್ವಾಗತಿಸಿದರು. ಕು. ಶೋಭಾ ಕಾರ್ಯಕ್ರಮ ನಿರೂಪಿಸಿದರು.

* A talk on Basics of Scouting and Guiding was organised on 21-08-2019. Students, Rangers-Rovers were present for the session. Prof. Ashwil Karkera, Rover Leader acquainted the students with the objectives and goals of the seminar. The resource person Sri M.G. Kaje, District Secratary, Scouts and Guides Bhavan, Dakshina Kannada reflected his knowledge on the topic and highlighted how the Rangers and Rovers are helpful to the society.



Sri M.G. Kaje in his address shared his scout experience with the students. He explained the principles, objectives, advantages, Motto and the law of the scout and guide. The origin of the salute and left had shake was made known to the students. An interactive concourse ignited the inqusitiveness of students.

* On account of International Literacy day a poster making competition was organized for Rovers and Rangers on 11th September 2019. The aim behind conducting this competition was to understand the importance of education and the creative and artistic skills of the students. The suggested theme of the competition was "The Roots of Education is Bitter but the Fruits are Sweet" The total time allotted for the activity was 1 hour. The students showed their abilities through art wherein they expressed their feelings in the form of quotations. painting. sketch etc.

The judges of the competition were Ms. Priyanka and Smt. Laxmi Hegde, Faculty of BBA Department.



* A Talk on Rovering and Rangering by Mr. Prathim Kumar, Leader Trainer Scouts and District Training Commissioner was held on 06-09-2019. Mr. Ashwil Karkera welcomed and introduced the resource person. Ten Rangers from Besant Womens College participated in the the talk.

Mr. Pratim Kumar in his Speech highlighted the programmes and activities, camping, community development programmes, camp fire, Discipline etc through power Point Presentation. He shared some of his experience in this movement. He appreciated the efforts of the rovers and rangers of different colleges for their contributions towards the society.

* The Kudroli Temple is a major place of worship and pilgrimage in Mangalore. The Kudroli Dasara is held annually in the month of September / October for nine days. As a part of Navarathri festival in Kudroli which began from 29-09-2019 and ended on October 08, 2019, six Rangers and one Rover under the Guidance of Rover Leader Mr. Ashwil Karkera and Ranger Leader Mrs. Dhanashree rendered voluntary services on October 02nd.

**Where the mind is without Fear**
**and the head is held high;**
**Where the World hasnot been**
**borkenup into fragments by narrow domestic walls**
**Where Words Come out from the Depth of Truth;**
**Where Sireless Striving Stretches its Arms**
**towards Perfection; where the clear stream**
**of reason has not lost its way into the dreary**
**Desert sand of Dead Habit.**
**Where the mind is led forward by these into ever**
**Widening thought and action into that heaven**
**of freedom, My father, Let My Country Awake.**

**- Rabindranath Tagore**

## ದಾವಣಗೆರೆ

ಅಕ್ಟೋಬರ್ 2 ರಂದು ಮಹಾತ್ಮಾ ಗಾಂಧೀಜಿ ಜಯಂತಿ ಪ್ರಯುಕ್ತ ಚನ್ನಗಿರಿ ಸ್ಥಳೀಯ ಸಂಸ್ಥೆವತಿಯಿಂದ ಸ್ವಚ್ಛತಾ ಆಂದೋಲನ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.

* ಅಕ್ಟೋಬರ್ 2 ರಂದು ಮಹಾತ್ಮಾ ಗಾಂಧೀಜಿಯವರ 150ನೇ ಹುಟ್ಟುಹಬ್ಬದ ಪ್ರಯುಕ್ತ ಧ.ರಾ.ಮ. ಸ್ಕೌಟ್ ಭವನದಲ್ಲಿ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಎಸ್.ಆರ್.ಎಲ್. ಪ್ರೌಢಶಾಲೆ, ಮಹಿಳಾ ಸೇವಾ ಸಮಾಜ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು, ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

* ಅಕ್ಟೋಬರ್ 3 ರಿಂದ 4 ರ ವರೆಗೆ ಧ.ರಾ.ಮ. ಸ್ಕೌಟ್ ಭವನದಲ್ಲಿ ಬನ್ನೀಸ್ ಮೂಲತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ 30 ಬನ್ನೀಸ್ ಆಂಟಿಯರು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀಮತಿ ಶಾಂತಾ. ಬಿ.ಡಿ. ರಾಜ್ಯ ಸಹಾಯಕ ಆಯುಕ್ತರು ಗೈಡ್ಸ್, ಇವರು ನಾಯಕತ್ವ ವಹಿಸಿದ್ದರು. ಸಿಬ್ಬಂದಿಗಳಾಗಿ ಶ್ರೀಮತಿ ವಜ್ರಗಂಗಮ್ಮ ಗೈಡ್ ಕ್ಯಾಪ್ಟನ್ ಮತ್ತು ಶ್ರೀಮತಿ ಅಶ್ವಿನಿ. ಜೆ, ಜಿಲ್ಲಾ ಸ್ಕೌಟ್ ಗೈಡ್ ಸ್ವಯಂ ಸೇವಕರು ಕಾರ್ಯ ನಿರ್ವಹಿಸಿದರು. ಶಿಬಿರವು ಅತ್ಯಂತ ಯಶಸ್ವಿಯಾಗಿ ನೆರವೇರಿತು.



* ಅಕ್ಟೋಬರ್ 11 ರಿಂದ 13 ರ ವರೆಗೆ ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ರೇಂಜರ್ಸ್‌ಗಳ ಪ್ರೇರಣಾ ಕಾರ್ಯಕ್ರಮವನ್ನು ನಗರದ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಲಾಗಿತ್ತು. ಜಿಲ್ಲೆಯ ವಿವಿಧ ಕಾಲೇಜುಗಳ 70 ರೇಂಜರ್ಸ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಡಾ. ಶಕುಂತಲಾ ರೇಂಜರ್ ಲೀಟ್ರ್ ಇವರು ವಹಿಸಿದ್ದರು. ಶಿಬಿರದ ಉಸ್ತುವಾರಿಯನ್ನು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀಮತಿ ರತ್ನ, ಎಂ, ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿಸುಖವಾಣಿ, ಸ್ಕೌಟ್-ಗೈಡ್ ಸ್ವಯಂ ಸೇವಕರಾದ ಶ್ರೀಮತಿ ಅಶ್ವಿನಿ ಜೆ. ವಹಿಸಿದ್ದರು. ಕಾರ್ಯಕ್ರಮದಲ್ಲಿ ರೇಂಜರ್ಸ್‌ಗಳಿಗೆ ರಸಪ್ರಶ್ನೆ, ಗುಂಪುಸಂಭಾಷಣೆ, ಯುವ ಧ್ವನಿ, ಗುಂಪು ಚರ್ಚೆ, ಕರಕುಶಲತೆ, ಅಲಂಕಾರಿಕೆ, ಆರ್ಥಿಕತೆ ನಿರ್ವಹಣೆ, ಸ್ವಾವಲಂಭನೆ, ಕಾನೂನಿನ ಅರಿವು ಇನ್ನಿತರೆ ವಿಷಯಗಳನ್ನು ಕುರಿತು ಚರ್ಚಿಸಲಾಯಿತು.

* ಅಕ್ಟೋಬರ್ 11ರಂದು ಪ್ರೇರಣ ಉದ್ಘಾಟನಾ ಸಮಾರಂಭವನ್ನು ಆಯೋಜಿಸಲಾಗಿತ್ತು. ಡಾ॥ ಶರಣಪ್ಪ ವಿ. ಹಲಸೆ ಕುಲಪತಿಗಳು, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ ಇವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಕೆ.ಜಿ. ಶರಣಪ್ಪ ಜಿಲ್ಲಾ ಉಪಾಧ್ಯಕ್ಷರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ದಾದಾಪೀರಿ. ಬಿ.ಎಸ್. ಪ್ರಾಂಶುಪಾಲರು ಸರ್ಕಾರ ಮಹಿಳಾ ಪ್ರಥಮ ದರ್ಜೆ ಕಾಲೇಜು, ಶ್ರೀ ಶಿವಮೂರ್ತಿ ಬಿ.ಎಲ್. ಪತ್ರಾಂಕಿತ ವ್ಯವಸ್ಥಾಪಕರು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಶ್ರೀಮತಿ ರೂಪ ತೆಂಬದ್ ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ವಿದ್ಯಾನಗರ, ದಾವಣಗೆರೆ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಇವರಿಗೆ ಸನ್ಮಾನ ನೆರೆವೇರಿಸಲಾಯಿತು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



* ಅಕ್ಟೋಬರ್ 17 ರಂದು ಧ.ರಾ.ಮ. ಸ್ಕೌಟ್ ಭವನದಲ್ಲಿ ಕಬ್ ಮಾಸ್ಟರ್ ಮತ್ತು ಫ್ಲಾಕ್ ಲೀಡರ್‌ಗಳ ಒಂದು ದಿನದ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ನ್ಯೂ ಸೆಂಟ್ ಪೀಟರ್ ಕಾನ್ವೆಂಟ್‌ನ 2 ಶಿಕ್ಷಕಿಯರು ಮತ್ತು ಜೈನ್ ವಿದ್ಯಾಲಯ ಶಾಲೆಯ 18 ಶಿಕ್ಷಕಿಯರು ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀಮತಿ ರತ್ನ ಎಂ., ಜಿಲ್ಲಾ ಕಾರ್ಯದರ್ಶಿಗಳು ಶ್ರೀಮತಿ ಎಸ್. ಸಿದ್ಧಮ್ಮ ಜಿಲ್ಲಾ ತರಬೇತಿ ಆಯುಕ್ತರು ಗೈಡ್ಸ್ ಮತ್ತು ಶ್ರೀ ಹೆಚ್. ಆಂಜನೇಯ ಕಬ್ ಮಾಸ್ಟರ್ ಇವರುಗಳು ವಹಿಸಿದ್ದರು.

* ಅಕ್ಟೋಬರ್ 19 ರಿಂದ 20 ರ ವರೆಗೆ ಶ್ರೀ ಸಿದ್ಧಗಂಗಾ ಸ್ಥಳೀಯ ಸಂಸ್ತೆ ವತಿಯಿಂದ ಪೆಟ್ರೋಲ್ ಲೀಡರ್ ತರಬೇತಿ



ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರದಲ್ಲಿ 350 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ಶ್ರೀಮತಿ ಶಶಿಕಲಾ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಶಿಬಿರದ ನೇತೃತ್ವ ವಹಿಸಿದ್ದರು. ಶ್ರೀ ಹಾಲಪ್ಪ, ಶ್ರೀ ಆಂಜನೇಯ ಹೆಚ್. ಶ್ರೀಮತಿ ಸಿದ್ಧಮ್ಮ, ಶ್ರೀಮತಿ ಅಶ್ವಿನಿ ಜೆ. ಸಿಬ್ಬಂದಿಗಳಾಗಿ ಕಾರ್ಯ ನಿರ್ವಹಿಸಿದ್ದರು.

* ಅಕ್ಟೋಬರ್ 30 ರಂದು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚನ್ನಗಿರಿ ಮತ್ತು ಹೊನ್ನಾಳಿ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ 2019-20ನೇ ಸಾಲಿನ ಕಾರ್ಯಚಟುವಟಿಕೆಗಳ ಬಗ್ಗೆ ಚರ್ಚಿಸಿದರು.

* ಅಕ್ಟೋಬರ್ 31 ರಂದು ನೂತನವಾಗಿ ರಚಿಸಿರುವ ಶ್ರೀ ಸಿದ್ಧಗಂಗಾ ಸ್ಥಳೀಯ ಸಂಸ್ಥೆ ಉದ್ಘಾಟನಾ ಸಮಾರಂಭವನ್ನು ಸಿದ್ಧಗಂಗಾ ಶಾಲೆಯಲ್ಲಿ ಆಯೋಜಿಸಲಾಗಿತ್ತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ನೂತನ ಸ್ಥಳೀಯ ಸಂಸ್ಥೆಯನ್ನು ಉದ್ಘಾಟಿಸಿದರು. ಶ್ರೀಮತಿ ಪಿ. ಸರೋಜ ಜಿಲ್ಲಾ ಮುಖ್ಯ ಆಯುಕ್ತರು ಬೆಂಗಳೂರು ಉತ್ತರ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎ.ಪಿ. ಷಡಾಕ್ಷರಪ್ಪ ಜಿಲ್ಲ ಸ್ಕೌಟ್ ಆಯುಕ್ತರು, ಶ್ರೀಮತಿ ಜಸ್ಟಿನ್ ಡಿಸೌಜ ಕಾರ್ಯಾಧ್ಯಕ್ಷರು, ಶ್ರೀ ಸಿದ್ಧಗಂಗಾ ಸ್ಥಳೀಯ ಸಂಸ್ಥೆ, ಶ್ರೀಮತಿ ಶಶಿಕಲಾ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಶ್ರೀಮತಿ ಎಂ. ರತ್ನ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.



* ನವೆಂಬರ್ 1ರಂದು ಕರ್ನಾಟಕ ರಾಜ್ಯೋತ್ಸವ ಕಾರ್ಯಕ್ರಮದ ಅಂಗವಾಗಿ ಜಿಲ್ಲಾ ಕ್ರೀಡಾಂಗಣದಲ್ಲಿ ಆಯೋಜಿಸಿದ್ದ ಪಥಸಂಚಲನ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆ ವತಿಯಿಂದ ಆರ್.ವಿ.ಜಿ.ಕೆ. ಶಾಲೆಯ ಸ್ಕೌಟ್ಸ್ ಮತ್ತು ಸೆಂಟ್ ಪಾಲ್ಸ್ ಕಾನ್ವೆಂಟ್ ಶಾಲೆಯ ಗೈಡ್ಸ್‌ಗಳು ಭಾಗವಹಿಸಿದ್ದರು. ಇದರಲ್ಲಿ ಸ್ಕೌಟ್‌ಗಳಿಗೆ ತೃತೀಯ ಬಹುಮಾನ ಲಭಿಸಿತು

* ನವೆಂಬರ್ 2 ರಿಂದ 3ರ ವರೆಗೆ ಮೈಸೂರಿನಲ್ಲಿ ಆಯೋಜಿಸಿದ್ದ ರಾಜ್ಯಮಟ್ಟದ ದೇಶಭಕ್ತಿ ಗೀತೆಗಳ ಗೀತಗಾಯನ ಸ್ಪರ್ಧೆಯಲ್ಲಿ ದಾವಣಗೆರೆ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ತಂಡಗಳು, ರೋವರ್-ಬುಲ್‌ಬುಲ್‌ಗಳು ಭಾಗವಹಿಸಿದ್ದರು. ರೋವರ್ ವಿಭಾಗದಲ್ಲಿ ರಾಜ್ಯ ಮಟ್ಟದ ತೃತೀಯ ಸ್ಥಾನ, ಬುಲ್‌ಬುಲ್ ವಿಭಾಗದಲ್ಲಿ ವಿಭಾಗೀಯ ಮಟ್ಟದ ತೃತೀಯ ಸ್ಥಾನ ಮತ್ತು ಸ್ಕೌಟ್ ವಿಭಾಗದಲ್ಲಿ ವಿಭಾಗೀಯ ಮಟ್ಟದ ದ್ವಿತೀಯ ಸ್ಥಾನ ಲಭಿಸಿತು.

* ನವೆಂಬರ್ 7ರಂದು ಸಂಸ್ಥಾಪನಾ ದಿನಾಚರಣೆಯ ಧ್ವಜಚೀಟಿಯನ್ನು ದಾವಣಗೆರೆ ಜಿಲ್ಲಾಧಿಕಾರಿಗಳಾದ ಶ್ರೀ ಮಹಾಂತೇಶ್ ಬೀಳಗಿ ಮತ್ತು ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾದ ಶ್ರೀ ಹನುಮಂತರಾಯ ಇವರ ಕಛೇರಿಯಲ್ಲಿ ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮೊಹಮ್ಮದ್ ವಾಸಿಲ್, ಹಾಗೂ ಎಲ್ಲಾ ಪದಾಧಿಕಾರಿಗಳು ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಭಾಗವಹಿಸಿದ್ದರು.

* ನವೆಂಬರ್ 7 ರಿಂದ 9ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಶಿಬಿರ ಕೇಂದ್ರ, ಕೊಂಡಜ್ಜಿ ಇಲ್ಲಿ ಜಿಲ್ಲಾ ಮಟ್ಟದ ಜಿಲ್ಲಾಪುರಸ್ಕಾರ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್ ಪರೀಕ್ಷ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಸ್ಕೌಟ್ಸ್ 328, ಗೈಡ್ಸ್ 254, ಕಬ್ಸ್ 53 ಮತ್ತು ಬುಲ್‌ಬುಲ್ಸ್ 65 ಭಾಗವಹಿಸಿದ್ದರು. ಸ್ಕೌಟ್ ವಿಭಾಗದ ನಾಯಕರು ಶ್ರೀ ಆರ್.ಟಿ. ಗಣೇಶ್, ಗೈಡ್ ವಿಭಾಗದ ನಾಯಕರಾಗಿ ಶ್ರೀಮತಿ ವಜ್ರಗಂಗಮ್ಮ, ಕಬ್ ವಿಭಾಗದ ನಾಯಕರಾಗಿ ಶ್ರೀ ಹೆಚ್. ಆಂಜನೇಯ, ಬುಲ್ ಬುಲ್ ವಿಭಾಗದ ನಾಯಕರಾಗಿ ಶ್ರೀಮತಿ ಶಿವಬಸಮ್ಮ ಕಲಕೋಟಿ, ಶಿಬಿರದ ಸಂಯೋಜಕರಾಗಿ ಶ್ರೀ ಎನ್.ಡಿ. ತಮ್ಮಣ್ಣನವರ್ ಜಿಲ್ಲಾ ತರಬೇತಿ ಆಯುಕ್ತರು ಸ್ಕೌಟ್ಸ್ ಭಾಗವಹಿಸಿದ್ದರು.

## ಗದಗ

ಅಕ್ಟೋಬರ್ 26ರಂದು ಜಿಲ್ಲಾ ಸ್ಕೌಟ್ ಕಾರ್ಯಾಲಯದ ಗುರುಭವನದಲ್ಲಿ ದೇಶಭಕ್ತಿಗೀತ-ಗೀತಗಾಯನ ಸ್ಪರ್ಧೆಯನ್ನು ನಡೆಸಲಾಯಿತು.



ಶಿಬಿರದ ಅಧ್ಯಕ್ಷತೆಯನ್ನು ಶ್ರೀ ಪ್ರದೀಪ್ ನೊಲಬನ್ನವರ ಬಿ.ಆರ್.ಪಿ. ಡಯಟ್ ವಹಿಸಿದ್ದರು. ಉದ್ಘಾಟಕರಾಗಿ ಶ್ರೀ ವಿ.ವಿ. ಹಿರೇಮಠ ಸೀನಿಯರ್ ಉಪನ್ಯಾಸಕರು ಡಯಟ್, ಗದಗ ವಹಿಸಿ ಮಾತನಾಡುತ್ತಾ ಇಂತಹ ಶಿಬಿರಗಳು ತಿಂಗಳಿಗೊಮ್ಮೆ ನಡೆಯುತ್ತಿದ್ದರೆ ಮಕ್ಕಳಲ್ಲಿ ಸ್ಕೌಟ್ಸ್-ಗೈಡ್ಸ್ ಅರಿವು ಮೂಡುತ್ತದೆ ಎಂದು ತಿಳಿಸಿದರು. ಶ್ರೀ ಜಿ.ಹೆಚ್. ಪೂಜಾರ ಜಿಲ್ಲಾ ಕಾರ್ಯದರ್ಶಿರವರು ದೇಶಭಕ್ತಿ ಗೀತೆ-ಗೀತಗಾಯನ ಶಿಬಿರದಿಂದ ಮಕ್ಕಳಲ್ಲಿ ದೇಶಾಭಿಮಾನ ಬೆಳೆಯಲು ಸಹಾಯಕಾರಿಯಾಗುತ್ತದೆ ಎಂದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ವಿ.ವಿ. ಹಿರೇಮಠರವರು ಮಾತನಾಡುತ್ತಾ ಇಂದಿನ ಜಗತ್ತಿಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ವ್ಯಕ್ತಿತ್ವ ಗುಣಗಳನ್ನು ಬೆಳೆಸುವಲ್ಲಿ ನೆರವಾಗುತ್ತದೆ ಎಂದರು ನಿರೂಪಣೆ, ಸ್ವಾಗತ ಹಾಗೂ ಪ್ರಾಸ್ತಾವಿಕ ನುಡಿಗಳನ್ನು ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ. ಮಾಡಿದರು.

* ನವೆಂಬರ್ 1ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಮುಂಡರಗಿ ತಾಲ್ಲೂಕು ಆಶ್ರಯದಲ್ಲಿ ಜಲಮರುಪೂರಣ ಅಭಿಯಾನ ಯಾತ್ರೆಯನ್ನು ಮುಂಡರಗಿ ಊರಿನ ಪ್ರಮುಖ ಬೀದಿಗಳಲ್ಲಿ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳಿಂದ ನಡೆಸಲಾಯಿತು.. ಸ್ಕೌಟ್ ಮಾಸ್ಟರ್‌ಗಳು ಗೈಡ್ ಕ್ಯಾಪ್ಟನ್ ರವರುಗಳು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದ ಸಿಬ್ಬಂದಿವರ್ಗ ಹಾಗೂ ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಪಾಲ್ಗೊಂಡಿದ್ದರು.



* ನವೆಂಬರ್ 1 ರಂದು ಜಿಲ್ಲಾಡಳಿತ ವತಿಯಿಂದ ನಡೆದ ಪಥಸಂಚಲನದಲ್ಲಿ ಕೆ.ಎಲ್.ಇ. ಶಾಲೆಯ ಸ್ಕೌಟ್ಸ್‌ಗಳು ಪ್ರಥಮ ಬಹುಮಾನವನ್ನು ಪಡೆದರು. ಜಿಲ್ಲಾ ಉಸ್ತುವಾರಿ ಸಚಿವರಾದ ಸನ್ಮಾನ್ಯ ಶ್ರೀ ಸಿ.ಸಿ. ಪಾಟೀಲರವರು ಬಹುಮಾನಗಳನ್ನು ನೀಡಿದರು. ಸನ್ಮಾನ್ಯ ಶ್ರೀ ಹೆಚ್.ಕೆ. ಪಾಟೀಲ ಶಾಸಕರು ಗದಗ, ಸನ್ಮಾನ್ಯ ಶ್ರೀ ಸಾಕನೂರ, ಎಂ.ಎಲ್.ಸಿ., ಜಿಲ್ಲಾ ಪಂಚಾಯತಿ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಸಿದ್ದು ಪಾಟೀಲ್, ಜಿಲ್ಲಾಧಿಕಾರಿಗಳಾದ ಸನ್ಮಾನ್ಯ ಶ್ರೀ ಎಂ.ಜಿ. ಹಿರೇಮಠ, ಜಿಲ್ಲಾ ಮುಖ್ಯ ಕಾರ್ಯನಿರ್ವಾಹಕರಾದ ಶ್ರೀ ಆನಂದ ಕೆ. ಹಾಗೂ ಗದಗ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳಾದ ಸನ್ಮಾನ್ಯ ಶ್ರೀನಾಥ ಜೋಶಿ ಉಪಸ್ಥಿತರಿದ್ದರು.

## ಹಾಸನ

ಅಕ್ಟೋಬರ್ 2ರಂದು ಹಾಸನ ನಗರದ ಎ.ವಿ. ಕಾಂತಮ್ಮ ಮಹಿಳಾ ಕಾಲೇಜಿನ ಸ್ಫೂರ್ತಿ ರೇಂಜರ್ ಘಟಕದ ಆಶ್ರಯದಲ್ಲಿ ಗಾಂಧೀಜಿ, ಲಾಲ್ ಬಹದ್ದೂರ್ ಶಾಸ್ತ್ರೀಜಿ ಹಾಗೂ ಕಸ್ತೂರಿಬಾ ಜಯಂತಿಯನ್ನು ಆಚರಿಸಲಾಯಿತು. ಅಧ್ಯಕ್ಷತೆ ವಹಿಸಿ ಮಾತನಾಡಿದ ಪ್ರಾಂಶುಪಾಲರಾದ ಶ್ರೀಮತಿ ಎಂ.ಬಿ. ಆಶಾಲತಾ, "ಗಾಂಧಿ ದೇಶದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಿದ್ದಾರೆ ಅವರ ಸರಳ ಜೀವನವನ್ನು ಅಳವಡಿಸಿಕೊಳ್ಳಬೇಕು" ಎಂದರು.

ಕನ್ನಡ ವಿಭಾಗದ ಮುಖ್ಯಸ್ಥರಾದ ಶ್ರೀ ಬಿ.ಎಸ್. ದೇವರಾಜ್ ರವರು ಸ್ವಾತಂತ್ರ್ಯ ಚಳವಳಿಯ ಬಗ್ಗೆ ವಿವರಿಸಿ ಗಾಂಧೀ ಹಾಗೂ ಶಾಸ್ತ್ರೀಯವರ ಗುಣಗಾನ ಮಾಡಿದರು



ಮತ್ತು ಗಾಂಧೀಜಿ ರವರು ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರನ್ನು ಸಂಘಟಿಸಿ ಅಲ್ಲಿನ ಸರ್ಕಾರದ ವಿರುದ್ಧ ಕೈಗೊಂಡ ಹೋರಾಟ ಹಾಗೂ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಗಾಂಧೀಜಿ ವಹಿಸಿದ ಶ್ರಮ ಕುರಿತು ವಿವರಿಸಿದರು.

ಈ ಕಾರ್ಯಕ್ರಮವನ್ನು ಸ್ಕೌಟ್-ಗೈಡ್ ಸಂಚಾಲಕರಾದ ವಾಣಿಜ್ಯ ಶಾಸ್ತ್ರದ ಉಪನ್ಯಾಸಕರಾದ ಶ್ರೀಮತಿ ಸಬೀಹಾ ಬೇಗಂ ಸಂಘಟಿಸಿದರು. ಕು॥ ಮಾಲತಿ ಹಾಗೂ ತಂಡ

ಭಜನಾ ಕಾರ್ಯಕ್ರಮ ನಡೆಸಿಕೊಟ್ಟರು. ಕು॥ ದಿವ್ಯ ನಿರೂಪಿಸಿ, ಸ್ವಾಗತಿಸಿ, ವಂದಿಸಿದರು. ಬೋಧಕ–ಬೋಧಕೇತರ ವರ್ಗ, ವಿದ್ಯಾರ್ಥಿಗಳು ಹಾಗೂ ಸ್ಕೌಟ್–ಗೈಡ್ ಸ್ಫೂರ್ತಿ ಘಟಕದ ವಿದ್ಯಾರ್ಥಿನಿಯರು ಭಾಗವಹಿಸಿದ್ದರು.

* ಹಾಸನ ಜಿಲ್ಲೆ ಅಧಿದೇವತೆ ಪುರಾಣ ಪ್ರಸಿದ್ಧ ಹಾಸನಾಂಬೆ ದರ್ಶನ ಭಾಗ್ಯ ವರ್ಷಕ್ಕೊಮ್ಮೆ ದೊರೆಯುತ್ತಿದ್ದು ಈ ಬಾರಿಯು ಕೂಡ 13 ದಿನಗಳ ಕಾಲ ದರ್ಶನ ಭಾಗ್ಯ ಭಕ್ತಾದಿಗಳಿಗೆ ದೊರೆತಿದೆ.

ಹೊರಜಿಲ್ಲೆ ಹಾಗೂ ಹೊರರಾಜ್ಯದಿಂದ ಸಾವಿರಾರು ಸಂಖ್ಯೆಯಲ್ಲಿ ಭಕ್ತಾದಿಗಳು ದೇವರ ದರ್ಶನ ಪಡೆಯುವ ಸಮಯದಲ್ಲಿ ಕುಡಿಯುವ ನೀರು ವಿತರಣೆ, ಪ್ರಸಾದ ವಿನಿಯೋಗ, ಸರತಿ ಸಾಲಿನಲ್ಲಿ ಸಾಗುವಂತೆ ನೋಡಿಕೊಳ್ಳುವುದು, ಆರೋಗ್ಯ ಸೇವೆ, ದೇವಾಲಯ ಆವರಣದಲ್ಲಿ ಸ್ವಚ್ಛತೆ ಹಾಗೂ ಇತರೆ ಸೇವಾ ಕಾರ್ಯಗಳನ್ನು ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್‌ಗಳು ಹಾಗೂ ಶಿಕ್ಷಕರುಗಳು ಅತ್ಯಂತ ಯಶಸ್ವಿಯಾಗಿ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ.

ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಸೇವಾ ಕಾರ್ಯ ಯಶಸ್ವಿಗೊಳಿಸಲು ಸಹಕರಿಸಿದಂತಹ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ದಳನಾಯಕ–ನಾಯಕಿಯರು ಹಾಗೂ ಇತರರನ್ನು ಅಭಿನಂದಿಸಿದರು.

ಜಿಲ್ಲೆಯ ವಿವಿಧ ಕಾಲೇಜುಗಳಿಂದ 200ಕ್ಕೂ ಹೆಚ್ಚು ರೋವರ್ಸ್–ರೇಂಜರ್ಸ್‌ಗಳು ಭಾಗವಹಿಸಿ ಸೇವಾ ಕಾರ್ಯ ಯಶಸ್ವಿಗೊಳಿಸಿದ್ದಕ್ಕಾಗಿ ಜಿಲ್ಲಾಡಳಿತದಿಂದ ಪ್ರಮಾಣ ಪತ್ರ ನೀಡಿ, ಜಿಲ್ಲಾಧಿಕಾರಿ ಶ್ರೀ ಆರ್. ಗಿರೀಶ್, ಉಪವಿಭಾಗಾಧಿಕಾರಿ ಡಾ. ಹೆಚ್.ಎಲ್. ನಾಗರ್ ಶ್ಲಾಘಿಸಿದರು.

* ಪ್ರತಿವರ್ಷದಂತೆ ಈ ವರ್ಷವೂ ಕೂಡ ಹಾಸನಾಂಬೆ ದೇವಿಯ ಕಾಣಿಕೆ ಹುಂಡಿಯಲ್ಲಿರುವ ಹಣ ಎಣಿಸುವ ಕಾರ್ಯದಲ್ಲಿ ರೋವರ್ಸ್–ರೇಂಜರ್ಸ್‌ಗಳು ಭಾಗವಹಿಸಿದ್ದರು.



## ಕಲಬುರಗಿ

ಅಕ್ಟೋಬರ್ 9 ರಿಂದ 10ರ ವರೆಗೆ ರಾಜ್ಯ ಪುರಸ್ಕಾರ ಪೂರ್ವ ಸಿದ್ಧತಾ ಪರೀಕ್ಷಾ ಶಿಬಿರವನ್ನು ಗುಲ್ಬರ್ಗಾ ವಿಶ್ವವಿದ್ಯಾಲಯ ಕಲಬುರಗಿಯಲ್ಲಿ ನಡೆಸಲಾಯಿತು. ಈ ಪರೀಕ್ಷಾ ಶಿಬಿರದಲ್ಲಿ ಒಟ್ಟು 50 ವಿದ್ಯಾರ್ಥಿಗಳು ಭಾಗವಹಿಸಿದ್ದರು. ಈ ಶಿಬಿರ ನೇತೃತ್ವವನ್ನು ಶ್ರೀ ಅಮರೇಶಕೋರೆ, ಜಿಲ್ಲಾ ತರಬೇತಿ ಆಯುಕ್ತರು ವಹಿಸಿದ್ದರು.

* ಅಕ್ಟೋಬರ್ 10 ರಿಂದ 16ರ ವರೆಗೆ ಭಾರತೀಯ ವಿದ್ಯಾಕೇಂದ್ರ, ಶಿರನೂರ ತಾಲೂಕ, ಕಲಬುರಗಿಯಲ್ಲಿ ನಡೆದ ಮೂಲ ತರಬೇತಿ ಶಿಬಿರದಲ್ಲಿ 30 ಸ್ಕೌಟ್ ಮಾಸ್ಟರ್ ಹಾಗು 15 ಗೈಡ್ ಕ್ಯಾಪ್ಟನ್ ರವರು ಭಾಗವಹಿಸಿದ್ದರು. ಸ್ಕೌಟ್ ತರಬೇತಿಯ ಶಿಬಿರ ನಾಯಕರಾಗಿ ಶ್ರೀ ಅಮರೇಶ ಕೋರೆ, ಜಿಲ್ಲಾ ತರಬೇತಿ ಆಯುಕ್ತರು, ಗೈಡ್ ಶಿಬಿರದ ನಾಯಕಿಯಾಗಿ ಶ್ರೀಮತಿ ಕಾತ್ಯಾಯಿನಿ, ಹಾಸನ ಇವರು ಕಾರ್ಯನಿರ್ವಹಿಸಿದರು. ಸನ್ಮಾನ್ಯಶ್ರೀ ಬಸವರಾಜ ಪಾಟೀಲ್ ಸೇಡಂ, ಮಾಜಿ ಲೋಕ ಸಭಾ ಸದಸ್ಯರು ಇವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭವು ಜರುಗಿತು.

* ಅಕ್ಟೋಬರ್ 15 ರಿಂದ 19ರ ವರೆಗೆ ಪೆಟ್ರೋಲ್ ಲೀಡರ್ ಕ್ಯಾಂಪ್ ಹಮ್ಮಿಕೊಳ್ಳಲಾಗಿತ್ತು. ಶ್ರೀ ರಾಣಪ್ಪಾ ಸಂಗನ ಶಿಬಿರದ ಸ್ಕೌಟ್ ಶಿಬಿರದ ನಾಯಕರಾಗಿ, ಶ್ರೀಮತಿ ಸುಮಂಗಲಾ ಅ. ಕೋರೆ ಇವರು ಗೈಡ್‌ನ ಶಿಬಿರದ ನಾಯಕಿಯಾಗಿ ತರಬೇತಿಯುನ್ನು ನಡೆಸಿಕೊಟ್ಟರು. ಈ ತರಬೇತಿಯಲ್ಲಿ 49 ಸ್ಕೌಟ್‌ಗಳು 10 ಗೈಡಗಳು ಭಾಗವಹಿಸಿದ್ದರು. ತರಬೇತಿಯನ್ನು ಸನ್ಮಾನ್ಯ ಮಾಜಿ ಶಾಸಕರಾದ ಬಿ.ಆರ್. ಪಾಟೀಲ್ ರವರು ಸಸಿಗೆ ನೀರು ಎರೆಯುವ ಮುಖಾಂತರವಾಗಿ ಉದ್ಘಾಟಿಸಿದರು. ಸಂಸ್ಥೆಯ ನಿರ್ದೇಶಕ ಮಂಡಳಿಯುವರು, ಜಿಲ್ಲಾ ಸಂಸ್ಥೆಯು ಪದಾಧಿಕಾರಿಗಳು ಭಾಗವಹಿಸಿದ್ದರು.

## ಕಾರವಾರ

ಆಗಸ್ಟ್ 23 ರಂದು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಎಲ್ಲರೂ ಸೇರಿ ನೆರೆಯಿಂದ ತೊಂದರೆಗೊಳಗಾದ ಕುಟುಂಬಗಳನ್ನು ಸೇರಿಸಿ, ಸಭೆ ನಡೆಸಿ ಪ್ರತಿನಿತ್ಯ ಉಪಯೋಗಿಸುವ ಊಟ ಉಪಚಾರದ ವಸ್ತುಗಳನ್ನು ನೀಡಿದರು.



* ಆಗಸ್ಟ್ 26 ರಿಂದ 29 ರಂದು ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆವತಿಯಿಂದ ನೀಡಲಾದ ದಿನನಿತ್ಯ ಬದುಕಿನ ಅವಶ್ಯವಿರುವ ವಸ್ತುಗಳನ್ನು ಉತ್ತರ ಕನ್ನಡ ಜಿಲ್ಲೆಯ ತೊಂದರೆಗೀಡಾದ ಕುಟುಂಬಗಳಿಗೆ ತಲುಪಿಸಲಾಯಿತು.

* ಸೆಪ್ಟೆಂಬರ್ 9 ರಂದು ಜಿಲ್ಲಾ ಮಟ್ಟದ ಗೀತಾ ಗಾಯನ ಸ್ಪರ್ಧೆಯನ್ನು ಕುಮಟಾ ಗಿಬ್ ಕರ್ಲ್ಸ್ ಪ್ರೌಢಶಾಲೆಯಲ್ಲಿ ನಡೆಸಲಾಯಿತು. ಈ ಸಮಾರಂಭಕ್ಕೆ ಉದ್ಘಾಟಕರಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಡಾ. ಜಿ.ಜಿ. ಸಭಾಹಿತ್ ಭಾಗವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಆಯುಕ್ತೆ(ಗೈ) ಶ್ರೀಮತಿ ಶೋಭಾ ಕುಲಕರ್ಣಿ, ಶ್ರೀ ಆರ್.ಟಿ. ಹೆಬ್ಬಾರ್ ಶ್ರೀಮತಿ ಶಾರದಾ, ಶ್ರೀ ಜಿ.ಆರ್. ಮಡಿವಾಳ ಶ್ರೀಮತಿ ಬೇಬಿ ಪಡಿಯಾರ್, ಶ್ರೀ ಬಿ. ಎಂ. ಭಟ್ ಶ್ರೀ ಬಿ.ಡಿ. ಫರ್ನಾಂಡೀಸ್ ಉಪಸ್ಥಿತರಿದ್ದರು. ಶ್ರೀಮತಿ ಸುಧಾ ಗೌಡ, ಸ್ಥಳೀಯ ಸಂಸ್ಥೆ ಅಧ್ಯಕ್ಷರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. 140 ಸ್ಕೌಟ್ಸ್-ಗೈಡ್ಸ್, ಬುಲ್‌ಬುಲ್ಸ್-ರೋವರ್ಸ್‌ಗಳು ಭಾಗವಹಿಸಿದ್ದರು.

* ಸೆಪ್ಟೆಂಬರ್ 21 ರಂದು ವಿಶ್ವ ಶಾಂತಿ ದಿನ, ಸ್ವಚ್ಛತಾ ಕಾರ್ಯಕ್ರಮ ಕಾರವಾರದಲ್ಲಿ, ಭಟ್ಕಳದಲ್ಲಿ, ಅಂಕೋಲ,



ಕುಮಟಾಗಳಲ್ಲಿ ನಡೆಯಿತು. ಜಿಲ್ಲಾ ಪದಾಧಿಕಾರಿಗಳು ರೋವರ್ಸ್ ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು, 149 ವಿದ್ಯಾರ್ಥಿಗಳು 10 ಶಿಕ್ಷಕರು ಭಾಗವಹಿಸದ್ದರು. ಹೊನ್ನಾವರದಲ್ಲಿ ಇಕೋ ಬೀಚ್‌ನಲ್ಲಿ ಕಾರ್ಯಕ್ರಮ ನಡೆಸಲಾಯಿತು. ಅರಣ್ಯಾಧಿಕಾರಿಗಳು, ಇಕೋ ಬೀಚ್ ಮುಖ್ಯಸ್ಥರುಗಳು ಸಹಕಾರ ನೀಡಿದರು.

* ಅಕ್ಟೋಬರ್ 2ರಂದು ಜಿಲ್ಲಾಡಳಿತ ನಡೆಸಿದ ಮಹಾತ್ಮ ಗಾಂಧಿಜಿಯವರ 150ನೇ ಜನ್ಮದಿನಾಚರಣೆ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀಜಿಯವರ ಜನ್ಮದಿನಾಚರಣೆ ಪ್ರಯುಕ್ತ ನಡೆದ ಸ್ವಚ್ಛತಾ ಕಾರ್ಯಕ್ರಮದಲ್ಲಿ ಎ.ಎಸ್.ಓ.ಸಿ. ಸ್ಕೌಟರ್ಸ್-ಗೈಡರ್ಸ್, ರೋವರ್ಸ್-ರೇಂಜರ್ಸ್, ರೋವರ್ ಲೀಡರ್ಸ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀಮತಿ ಶಶಿಕಲಾ ಜೊಲ್ಲೆ ಶ್ರೀ ಅಣ್ಣಾ ಸಾಹೇಬ್, ಶ್ರೀ ಡಾ. ಹರೀಶ್ ಕುಮಾರ್ ಐ.ಎ.ಎಸ್. ಜಿಲ್ಲಾಧಿಕಾರಿಗಳು, ಶ್ರೀಮತಿ ರೂಪಾಲಿ ನಾಯ್ಕ, ಎಂ.ಎಲ್.ಎ., ಶ್ರೀ ಎಂ. ರೋಷನ್. ಸಿ.ಇ.ಓ. ಶ್ರೀ ಮಂಜುನಾಥ ಕೆ.ಡಿ.ಡಿ.ಪಿ.ಐ. ಕಾರವಾರ ಹಾಗೂ ಶ್ರೀ ಶಾಂತೇಶ್ ನಾಯ್ಕ ಬಿ.ಇ.ಓ ಭಾಗವಹಿಸಿದ್ದರು.

* ಅಕ್ಟೋಬರ್ 3 ರಿಂದ 5ರ ವರೆಗೆ ಹೊನ್ನಾವರದ ಜಿ.ಎಫ್.ಜಿ.ಸಿ. ಕಾಲೇಜ್‌ನಲ್ಲಿ ಶ್ರೀಮತಿ ಸುಮಂಗಲಾ ನಾಯ್ಕ, ಪ್ರಾಂಶುಪಾಲರು ಇವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಪ್ರೇರಣಾ ಶಿಬಿರ ನಡೆಲಾಯಿತು. ಡಾ. ಉಷಾ ಅಸ್ಯಾಗರ್, ಡಾ॥ ವೈಶಾಲಿ ನಾಯ್ಕ ಹಳದೀಪುರ ಶ್ರೀಮತಿ ಶರಾವತಿ ಹೆಗ್ಗಡೆ, ವಕೀಲರು, ಹೊನ್ನಾವರ ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀ ಆರ್.ಟಿ. ಹೆಬ್ಬಾರ್ ಎ.ಎಸ್.ಓ.ಸಿ. ಶ್ರೀ ಕರಿಸಿದ್ದಪ್ಪ, ಡಿ.ಟಿ.ಸಿ. ಶ್ರೀಮತಿ ಬೇಬಿ ಪಡಿಯಾರ್, ಶ್ರೀಮತಿ ಸುಜಾತಾ ರೇಂಜರ್ ಲೀಡರ್ ಶ್ರೀಮಹಂತೇಶ್ ಹೊಸಮನಿ, ರೋವರ್ ಲೀಡರ್ ಭಾಗವಹಿಸಿದ್ದರು. 180 ರೇಂಜರ್ಸ್ ಭಾಗವಹಿಸಿದ್ದರು. ಈ ಶಿಬಿರದಲ್ಲಿ ಆರೋಗ್ಯ, ಮಹಿಳಾ ಸಬಲೀಕರಣ ಕಾನೂನಿನ ಅರಿವು ಇವುಗಳ ಬಗ್ಗೆ ನ್ಯಾಯವಾದಿಗಳು, ಆರೋಗ್ಯಾಧಿಕಾರಿಗಳು, ಸಾಮಾಜಿಕ ಕಾರ್ಯಕರ್ತರು ಭಾಗವಹಿಸಿ ಮಾಹಿತಿ ನೀಡಿದರು.

* ಅಕ್ಟೋಬರ್ 10 ರಿಂದ 12ರ ವರೆಗೆ ಜಿಲ್ಲಾ ಮಟ್ಟದ ಪ್ರಕೃತಿ ಅಧ್ಯಯನ ಶಿಬಿರವನ್ನು ಹೊನ್ನಾವರದಲ್ಲಿ ಏರ್ಪಡಿಸಲಾಯಿತು. ಡಾ. ಜಿ.ಜಿ. ಸಭಾಹಿತ್ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಉಪಸ್ಥಿತರಿದ್ದರು. ರೋವರ್ ಲೀಡರ್ ಶ್ರೀ ಮಹಂತೇಶ್ ಹೊಸಮನೆ, ಶ್ರೀಮತಿ ಸುಜಾತಾ ರೇಂಜರ್ ಲೀಡರ್, ಉಪನ್ಯಾಸಕ ವರ್ಗದವರು, 120 ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು.

* ಅಕ್ಟೋಬರ್ 12 ರಿಂದ 14ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಪ್ರಾವೀಣ್ಯತಾ ಪದಕ ಶಿಬಿರ ನಡೆಸಲಾಯಿತು. ಈ ಶಿಬಿರದಲ್ಲಿ 106ಸ್ಕೌಟ್ಸ್-ಗೈಡ್ಸ್‌ಗಳು 10 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರವನ್ನು ಗೋಕರ್ಣದ ಶ್ರೀ ರಾಘವೇಶ್ವರ ಟ್ರಸ್ಟ್ ಆಂಗ್ಲ ಮಾಧ್ಯಮ ಶಾಲೆಯಲ್ಲಿ ನಡೆಸಲಾಯಿತು. ಶಿಬಿರದಲ್ಲಿ ನಾಯಕರಾಗಿ ಶ್ರೀ ಬಿ.ಆರ್. ಮಡಿವಾಳ, ಶ್ರೀಮತಿ ಬೇಬಿ ಪಡಿಲೋರ ಭಾವಹಿಸಿದ್ದರು.



## ಕೊಡಗು

ನವೆಂಬರ್ 1ರಂದು ಕೊಡಗು ಜಿಲ್ಲಾಡಳಿತದಿಂದ ನಡೆದ "ಕನ್ನಡ ರಾಜ್ಯೋತ್ಸವ" ಕಾರ್ಯಕ್ರಮ ಸಂದರ್ಭದಲ್ಲಿ ಸ್ಕೌಟ್ಸ್-ಗೈಡ್ಸ್‌ನಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿದ ಕಬ್ ಮಾಸ್ಟರ್ ಮತ್ತು ವೀರಾಜಪೇಟೆ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀಮತಿ ಎಂ.ಕೆ. ನಳಿನಾಕ್ಷಿ, ಸೋಮವಾರಪೇಟೆ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಚಂದ್ರಶೇಖರ್, ಮಡಿಕೇರಿ ತಾಲ್ಲೂಕಿನ ಸ್ಕೌಟ್ ಮಾಸ್ಟರ್ ಶ್ರೀಮತಿ ಉಷಾರಾಣಿ ಅವರನ್ನು ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀಮತಿ ಸುನೀತ ಸುಬ್ರಮಣಿ, ಶ್ರೀಮತಿ ವೀಣಾ ಅಚ್ಚಯ್ಯ ಜಿಲ್ಲಾಧಿಕಾರಿಗಳಾದ ಶ್ರೀ ಅನೀಸ್ ಕಣ್ಮಣಿ ಜಾಯ್ ಪೋಲೀಸ್ ವರಿಷ್ಠಾಧಿಕಾರಿಗಳಾದ ಶ್ರೀಮತಿ ಸುಮನ್ ಪನ್ನೇಕರ್ ಇವರು ಸನ್ಮಾನಿಸಿದರು. ಈ ಸಂದರ್ಭದಲ್ಲಿ ಉಪನಿರ್ದೇಶಕರಾದ ಶ್ರೀ ಮಚ್ಚಾಡೋ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀಮತಿ ಗಾಯಿತ್ರಿ, ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷರಾದ ಶ್ರೀ ಲೋಕೇಶ್ ಸಾಗರ್, ಮಡಿಕೇರಿ ತಾಲ್ಲೂಕ ಪಂಚಾಯತ್ ಅಧ್ಯಕ್ಷರಾದ ಶ್ರೀ ತೆಕ್ಕಡೆ ಶೋಭ ಮೋಹನ್, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಜಿಮ್ಮಿ ಸಿಕ್ವೇರಾ, ಜಿಲ್ಲಾ ಸಂಘಟಕಿ ಶ್ರೀಮತಿ ದಮಯಂತಿ, ಎಸ್.ಜಿ.ವಿ. ಕು॥ ರಂಜನಿ ಇತರರು ಭಾಗವಹಿಸಿದ್ದರು.



* ನವೆಂಬರ್ 6ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಮ್ಯಾನ್ಸ್ ಕಾಂಪೌಂಡ್ ಮಡಿಕೇರಿ ಇಲ್ಲಿಗೆ ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಯವರಾದ ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ ಯವರು ಆಗಮಿಸಿದ್ದರು.



ಈ ಸಂದರ್ಭ ಸಂಸ್ಥೆಯ ಪೂರ್ಣ ಮಾಹಿತಿಯನ್ನು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಜಿಮ್ಮಿ ಸಿಕ್ವೇರ ರವರು ನೀಡಿದರು. ಈ ವೇಳೆ ಜಿಲ್ಲಾ ಸಂಘಟಕರಾದ ಶ್ರೀಮತಿ ಯು.ಸಿ. ದಮಯಂತಿ, ಸ್ಕೌಟ್-ಗೈಡ್ ಸ್ವಯಂ ಸೇವಕರಾದ ರಂಜಿನಿ ಮತ್ತು ಕಛೇರಿ ಸಿಬ್ಬಂದಿ ಗಾನ ರವರು ಹಾಜರಿದ್ದರು.

## ಕೊಪ್ಪಳ

ನವೆಂಬರ್ 6 ರಂದು ಬಾಲಕಿಯರ ಸರಕಾರಿ ಪದವಿಪೂರ್ವ ಕಾಲೇಜು ಕೊಪ್ಪಳದಲ್ಲಿ ಜಿಲ್ಲಾಮಟ್ಟದ ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರಗಳ ಒಂದು ದಿನದ ಪ್ರಾರಂಭಿಕ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನಾ ಕಾರ್ಯಕ್ರಮದಲ್ಲಿ ಶ್ರೀಮತಿ ಅರುಣ ವಸ್ತ್ರದ ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಮಲ್ಲಿಕಾರ್ಜುನ ಚೌಕಿಮಠ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಸದರಿ ಕಾಲೇಜಿನ ಪ್ರಾಚಾರ್ಯರು, ಶ್ರೀ ಮಾರುತಿ ಆರೇರ ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಶ್ರೀಕಾಂತ ಮಾಸಗಟ್ಟಿ ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಶ್ರೀ ಮುಸ್ತಿಸಾಬ ತಾಲೂಕ ಖಜಾಂಚಿ ಭಾಗವಹಿಸಿದ್ದರು. ಶಿಬಿರದ ನಾಯಕಿಯಾಗಿ ಶ್ರೀಮತಿ ಮಲ್ಲೇಶ್ವರಿ ಜುಜಾರೆ ಎಲ್.ಟಿ. (ಗೈಡ್) ಕಾರ್ಯನಿರ್ವಹಿಸಿದ್ದರು. ಶಿಬಿರದಲ್ಲಿ 50 ಜನ ರೋವರ್ ಸ್ಕೌಟ್ ಲೀಡರುಗಳು ಮತ್ತು 6 ಜನ ರೇಂಜರ್ ಲೀಡರುಗಳು ಭಾಗವಹಿಸಿದ್ದರು.



* ನವೆಂಬರ್ 7 ರಂದು ಯಲಬುರ್ಗಾ ಸ್ಥಳೀಯ ಸಂಸ್ಥೆಯ ವತಿಯಿಂದ ಸಂಸ್ಥಾಪಕ ದಿನಾಚರಣೆ ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ತಾಲೂಕಿನ ತಹಶೀಲ್ದಾರ ಮಾನ್ಯ ಶ್ರೀಶೈಲ್ ತಳವಾರ ಹಾಗೂ ಶ್ರೀ ಶರಣಪ್ಪ ವಟಗಲ್ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಡಾ : ಶಿವರಾಜ ಗುರಿಕಾರ, ಪ್ರಾಚಾರ್ಯರು, ಸರಕಾರಿ ಪ್ರಥಮ ದರ್ಜೆ ಕಾಲೇಜ್, ಯಲಬುರ್ಗಾ, ಶ್ರೀ ಶ್ರೀಕಾಂತ ಮಾಸಗಟ್ಟಿ, ಜಿಲ್ಲಾ ತರಬೇತಿ ಆಯುಕ್ತರು ಸ್ಕೌಟ್ ಧ್ವಜ ಚೀಟಿ ಬಿಡುಗಡೆ ಮಾಡಿದರು. ಸ್ಕೌಟ್-ಗೈಡ್, ರೋವರ್ಸ್‌ಗಳು

ಹಾಗೂ ತಾಲ್ಲೂಕ ಪದಾಧಿಕಾರಿಗಳು ಪಟ್ಟಣದ ಎಲ್ಲಾ ಇಲಾಖೆಗಳ ಅಧಿಕಾರಿಗಳಿಂದ ಧ್ವಜ ಚೀಟಿ ಬಿಡುಗಡೆ ಮಾಡಿಸಿ ಹುಂಡಿಯನ್ನು ಸಂಗ್ರಹಿಸಲಾಯಿತು. ಒಟ್ಟು 7500 ರೂ. ಗಳು ಸಂಗ್ರಹವಾಯಿತು.

* ನವೆಂಬರ್ 8 ರಂದು ಜಿಲ್ಲಾ ಸಂಸ್ಥೆ ಕೊಪ್ಪಳ ವತಿಯಿಂದ ಸಂಸ್ಥಾಪನಾ ಸಮಾರಂಭದಲ್ಲಿ ಅಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್ ಹಾಗು ಜಿಲ್ಲಾಧಿಕಾರಿಗಳಾದ ಶ್ರೀ ಪಿ. ಸುನೀಲ್ ಕುಮಾರ್ ರವರು ಸಂಸ್ಥಾಪನಾ ಧ್ವಜ ಚೀಟಿಯನ್ನು ಬಿಡುಗಡೆ ಮಾಡಿ ಸ್ಕೌಟ್ಸ್-ಗೈಡ್ಸ್ ಅಭ್ಯರ್ಥಿಗಳ ಕಲ್ಯಾಣ ನಿಧಿಗೆ ದೇಣಿಗೆ ನೀಡಿದರು. ಈ ಕಾರ್ಯಕ್ರಮದಲ್ಲಿ ಮಹಾವೀರ್ ಪಬ್ಲಿಕ್ ಶಾಲೆಯ ಮುಖ್ಯ ಗುರುಗಳಾದ ಶ್ರೀ ರಾಮಣ್ಣ ಭಣಪುರ, ಗವಿಶ್ರೀ ಕಿರಿಯ ಪ್ರಾಥಮಿಕ ಶಾಲೆ ಮುಖ್ಯ ಗುರುಗಳು ಹಾಗೂ ಫ್ಲಾಕ್ ಲೀಡರ್ಸ್-ಸ್ಕೌಟ್ ಮಾಸ್ಟರ್ಸ್‌ರವರು ಭಾಗವಹಿಸಿದ್ದರು.

ನಂತರ ವಿವಿಧ ಕಛೇರಿಗಳಿಗೆ ತೆರಳಿ ಧ್ವಜ ಚೀಟಿ ಬಿಡುಗಡೆ ಮಾಡಿಸಲಾಯಿತು.





## ಕೋಲಾರ

ಅಕ್ಟೋಬರ್ 16 ರಂದು ಕೋಲಾರ ನಗರದ ಪ್ರಮುಖ ಬೀದಿಗಳಲ್ಲಿ ಮತದಾನ ಪಟ್ಟಿಗೆ ನೂತನ ಹೆಸರು ಸೇರಿಸುವ ಬಗ್ಗೆ ಜಾಥ ನಡೆಸಿ ಮನೆ ಮನೆಗೆ ಚೀಟಿ ನೀಡಿ ಮಾಹಿತಿ ನೀಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸಂಘಟಕರಾದ ಶ್ರೀ ವಿ. ಬಾಬು, ಶ್ರೀ ವಿಶ್ವನಾಥ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.



* ಅಕ್ಟೋಬರ್ 23ರಂದು ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆದ ಜಿಲ್ಲಾ ಮಟ್ಟದ ಪ್ರತಿಭಾ ಕಾರಂಜಿಯಲ್ಲಿ ವಿವಿಧ ಕಾಲೇಜುಗಳ ರೋವರ್ಸ್-ರೇಂಜರ್ಸ್‌ಗಳು ಸ್ವಯಂ ಸೇವಕರಾಗಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಘಟಕರಾದ ಶ್ರೀ ವಿಶ್ವನಾಥ ಮತ್ತು ಶ್ರೀ ಬಾಬು ಉಪಸ್ಥಿತರಿದ್ದರು.

* ಅಕ್ಟೋಬರ್ 31ರಂದು ಕೋಲಾರ ತಾಲ್ಲೂಕಿನ ಸೊಣ್ಣೇನಹಳ್ಳಿ ಶಾಲೆಯಲ್ಲಿ ನೂತನ ಸ್ಕೌಟ್ಸ್ ದಳ ಉದ್ಘಾಟನೆ ಮತ್ತು ರಾಷ್ಟ್ರೀಯ ಏಕತಾ ದಿನಾಚರಣೆಯನ್ನು ಆಚರಿಸಲಾಯಿತು. ಇದರ ಸವಿ ನೆನಪಿಗಾಗಿ ಗಿಡವನ್ನು ನೆಡಲಾಯಿತು.

* ನವೆಂಬರ್ 1ರಂದು ಕನ್ನಡ ರಾಜ್ಯೋತ್ಸವದ ಅಂಗವಾಗಿ ಪ್ಲಾಸ್ಟಿಕ್ ಮುಕ್ತ ಭಾರತ ಎಂಬ ಸಂದೇಶದೊಂದಿಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ ಮತ್ತು ಕೋಲಾರ ಸ್ಥಳೀಯ ಸಂಸ್ಥೆ ವತಿಯಿಂದ "ಪ್ಲಾಸ್ಟಿಕ್ ಬಳಕೆ ನಿಲ್ಲಿಸಿ, ಕೈ ಚೀಲ ಬಳಸಿ", "ಪರಿಸರ ಉಳಿಸಿ" ಎಂಬ ಸಂದೇಶ ಸಾರುವ ಸ್ಥಬ್ಧ ಚಿತ್ರ ಮೆರವಣಿಗೆಗೆ ಜಿಲ್ಲಾ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರಾದ ಅಶೋಕ್ ರವರು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಶ್ರೀಮತಿ ಕೆ.ಆರ್. ಜಯಶ್ರೀ ಮುಂತಾದವರು ಉಪಸ್ಥಿತರಿದ್ದರು.

* ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ವಿದ್ಯಾರ್ಥಿಗಳಿಗೆ ಶಿಸ್ತು, ಸೇವೆ, ನಾಯಕತ್ವ ಗುಣಗಳು ಹಾಗು ಸಮಾಜದಲ್ಲಿ ಉತ್ತಮ ನಾಗರೀಕರನ್ನಾಗಿ ತಯಾರು ಮಾಡುವ ಅಂತರ್‌ರಾಷ್ಟ್ರೀಯ ಸಂಸ್ಥೆಯಾಗಿದೆ. ಸಂಸ್ಥೆಯ ಧ್ವಜಗಳನ್ನು ಎಲ್ಲರೂ ಸಹ ಖರೀದಿ ಮಾಡಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಿಗೆ





ಪ್ರೋತ್ಸಾಹಿಸಬೇಕೆಂದು ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಸಂಸ್ಥೆಯ ಮಹಾ ಪೋಷಕರಾದ ಶ್ರೀ ಜೆ. ಮಂಜುನಾಥ ಅವರು ತಿಳಿಸಿದರು.

ಭಾರತ್ ಸ್ಕೌಟ್ಸ್-ಗೈಡ್ಸ್ ಕೋಲಾರ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆ ಮತ್ತು ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಸಭಾಂಗಣದಲ್ಲಿ ಧ್ವಜಗಳನ್ನು ಬಿಡುಗಡೆಗೊಳಿಸಿ ಮಾತನಾಡಿದರು.

ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಮಾತನಾಡಿ ಸ್ಕೌಟ್ಸ್-ಗೈಡ್ಸ್ 1950 ಸಾಲಿನ ಮುಂಚೆ ವಿವಿಧ ರೀತಿಯ ಅನೇಕ ಸ್ಕೌಟ್ಸ್-ಗೈಡ್ಸ್ ಸಂಸ್ಥೆಗಳು ಪ್ರಾಂತ್ಯವಾರು ಇದ್ದವು ಅಖಂಡ ಭಾರತದಲ್ಲಿ ಎಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಗಳು ಒಂದಾಗಿ ಕಾರ್ಯನಿರ್ವಹಿಸುತ್ತಿದೆ ಎಂದರು.

ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಡಗೂರು ನಾಗರಾಜ್, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ಮುಂತಾದವರು ಭಾಗವಹಿಸಿದ್ದರು.

ಇದೇ ದಿನ ಕೋಲಾರ ಸ್ಥಳೀಯ ಸಂಸ್ಥೆಯ, ಚಿನ್ಮಯ ಶಾಲೆಯಲ್ಲಿ ಕೋಲಾರ ಸ್ಥಳೀಯ ಸಂಸ್ಥೆಯ ವತಿಯಿಂದ ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು.

* ನವೆಂಬರ್ 8ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್-ರೇಂಜರ್ ಘಟಕಗಳ ವತಿಯಿಂದ ಅಂತರಗಂಗೆ ಬೆಟ್ಟಕ್ಕೆ ಚಾರಣವನ್ನು ಹಮ್ಮಿಕೊಳ್ಳಲಾಗಿತ್ತು ರೋವರ್ ಲೀಡರ್ ಡಾ. ಈರಣ್ಣ, ರೇಂಜರ್ ಲೀಡರ್ ಶ್ರೀಮತಿ ಜೋತಿ ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ನವೆಂಬರ್ 13 ರಂದು ಯುವ ಕೇಂದ್ರ, ಕೋಲಾರ, ಭಾರತ್ ಸ್ಕೌಟ್ಸ್-ಗೈಡ್ಸ್ ಕೋಲಾರ ಮತ್ತು ಬೆಂಗಳೂರು ಉತ್ತರ ವಿಶ್ವವಿದ್ಯಾಲಯ ಟಮಕ, ಸರ್ಕಾರಿ ಬಾಲಕರ ಕಾಲೇಜು ಇವರ ಸಂಯುಕ್ತ ಆಶ್ರಯದಲ್ಲಿ ಜಲಶಕ್ತಿ ಜಾಗೃತಿ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮವನ್ನು ಮಾನ್ಯ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಶ್ರೀ ಹೆಚ್.ವಿ. ದರ್ಶನ್ ಉದ್ಘಾಟಿಸಿದರು. ಕುಲಪತಿ ಡಾ. ಕೆಂಪಯ್ಯರವರು ಅಧ್ಯಕ್ಷತೆಯನ್ನು ವಹಿಸಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಮಧುಲತಾ ಮೋಸೆಸ್, ಕ್ರೀಡಾ ಇಲಾಖೆಯ ನಿರ್ದೇಶಕರಾದ ಶ್ರೀಮತಿ ಗೀತಾ, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ಸಂಘಟಕರಾದ ಶ್ರೀ ವಿ. ಬಾಬು ವಿಶ್ವನಾಥ ಹಾಗೂ ಶ್ರೀ ಎನ್.ವೈ.ಸಿ. ಪ್ರವೀಣ್ ಕುಮಾರ್ ಮುಂತಾದವರು ಹಾಜರಿದ್ದರು.

* ನವೆಂಬರ್ 15ರಂದು ಕೆ.ಜಿ.ಎಫ್.ನ ಜೈನ್ ಅಂತಾರಾಷ್ಟ್ರೀಯ ಶಾಲೆ ಮತ್ತು ಬಿ.ವಿ.ಎನ್. ಶಾಲೆಯಲ್ಲಿ ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು.

* ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಅತ್ಯಗತ್ಯ, ಎಲ್ಲಾ ಮಕ್ಕಳು ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಪಡೆಯಲು ಪೋಷಕರು ಉತ್ತಮ ಸಹಕಾರ ನೀಡಬೇಕು. ಎಂದು ಕೋಲಾರ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಅಶ್ವಥ್ ನಾರಾಯಣ ತಿಳಿಸಿದರು.

ನಂತರ ಕೋಲಾರದ ನಗರದ ಕಛೇರಿ ಆವರಣದಲ್ಲಿ ಸ್ಥಳೀಯ ಸಂಸ್ಥೆ ಆಯೋಜಿಸಿದ್ದ ಧ್ವಜ ದಿನಾಚರಣೆಯ ಅಂಗವಾಗಿ ಸ್ಕೌಟ್ಸ್-ಗೈಡ್ಸ್ ಧ್ವಜಗಳನ್ನು ಬಿಡುಗಡೆ ಮಾಡಿ ಅವರು ಮಾತನಾಡಿದರು.

ಜಿಲ್ಲಾ ತರಬೇತಿ ಆಯುಕ್ತ ಶ್ರೀ ವಿ.ಎಂ. ನಾರಾಯಣಸ್ವಾಮಿ ರವರು ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಮನ್ನಣೆ ಪಡೆದು ವಿಶ್ವದ 276 ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ವಿದ್ಯಾರ್ಥಿಗಳನ್ನು ಉತ್ತಮ ನಾಗರೀಕರಾಗಿ ತಯಾರು ಮಾಡುವಲ್ಲಿ ಯಶಸ್ವಿಯಾಗಿದ್ದು, ಜೀವನ ಕೌಶಲಗಳನ್ನು ಬಾಲ್ಯದಿಂದಲೇ ರೂಪಿಸುವ ಸೇವಾ ಸಂಸ್ಥೆಯಾಗಿದ್ದು ಜಿಲ್ಲೆಯ ಎಲ್ಲಾ ಶಾಲಾ ಕಾಲೇಜುಗಳಲ್ಲಿ ಮತ್ತಷ್ಟು ಹೆಚ್ಚಿನ ಸಹಕಾರ ಸಿಕ್ಕರೆ ಶಿಬಿರಗಳನ್ನು ಆಯೋಜಿಸಲಾಗುವುದು ಎಂದು ತಿಳಿಸಿದರು.

ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು ಮಾನತಾಡಿ ನಮ್ಮ ಜಿಲ್ಲೆಯ ಎಲ್ಲಾ ಹಂತದ ಅಧಿಕಾರಿಗಳ ಸಹಕಾರ ಮತ್ತು ಮಾರ್ಗದರ್ಶನದಿಂದ ಕಳೆದ ವರ್ಷದಲ್ಲಿ ರಾಜ್ಯ ಮಟ್ಟದಲ್ಲಿ ಎರಡನೇ ಸ್ಥಾನ ಗಳಿಸಲು ಸಾಧ್ಯವಾಯಿತು. ಈ ಸ್ಥಾನ ಪಡೆಯಲು ನಮ್ಮ ಜಿಲ್ಲೆಯ ಶಿಕ್ಷಕರು ತಮ್ಮ ಬಿಡುವಿನ ವೇಳೆ ಹಾಗೂ ರಜೆಯಲ್ಲಿ ನಿಸ್ವಾರ್ಥ ಮನೋಭಾವದಿಂದ ಶ್ರಮಿಸಿದ್ದಾರೆ ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಪದಾಧಿಕಾರಿಗಳು ಭಾಗವಹಿಸಿದ್ದರು.

## ಮಂಡ್ಯ

ಅಕ್ಟೋಬರ್ 2ರಂದು ಮಂಡ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ 150ನೇ ಗಾಂಧೀ ಜಯಂತಿಯ ಅಂಗವಾಗಿ ಸರ್ವಧರ್ಮ ಪ್ರಾರ್ಥನೆ ಹಾಗೂ ಪ್ಲಾಸ್ಟಿಕ್ ನಿಷೇಧ ಜಾಗೃತಿ ಅಭಿಯಾನವನ್ನು ಹಮ್ಮಿಕೊಳ್ಳಲಾಗಿತ್ತು.

ಶ್ರೀ ವರಪ್ರಸಾದ್, ಜಿಲ್ಲಾ ಮುಖ್ಯ ಆಯುಕ್ತರು ಅವರ ಅಧ್ಯಕ್ಷತೆಯಲ್ಲಿ ಪ್ಲಾಸ್ಟಿಕ್ ನಿಷೇಧ ಜಾಗೃತಿ ಪ್ರತಿಜ್ಞಾ ವಿಧಿಯನ್ನು ಬೋಧಿಸಲಾಯಿತು.



ನಂತರ ಜಿಲ್ಲಾ ಸಂಸ್ಥೆಯಿಂದ ಜಿಲ್ಲಾ ಆಸ್ಪತ್ರೆಯ ವರೆಗೆ ಜಾಥಾ ಹಮ್ಮಿಕೊಳ್ಳಲಾಗಿತ್ತು. ಡಾ॥ ಹರೀಶ್ ಕುಮಾರ್, ಮೆಡಿಕಲ್ ಸೂಪರಿಡೆಂಟ್ ಅವರು ಪ್ಲಾಸ್ಟಿಕ್ ನಿಷೇಧದ ಬಗ್ಗೆ ಜನರಲ್ಲಿ ಅರಿವು ಮೂಡಿಸುತ್ತಿರುವ ಭಾರತ್ ಸ್ಕೌಟ್-ಗೈಡ್ ಸಂಸ್ಥೆಯ ಬಗ್ಗೆ ತಮ್ಮ ಹರ್ಷವನ್ನು ವ್ಯಕ್ತಪಡಿಸಿದರು. ಜಿಲ್ಲಾ ಆಸ್ಪತ್ರೆಯ ಶ್ರೀ ರವೀಂದ್ರಗೌಡ ಆರ್.ಎಂ. ಉಮೇಶ್, ಶ್ರೀ ಶಿವರಾಮೇಗೌಡ, ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಜಯಲಕ್ಷ್ಮಿಗೌಡ, ಜಿಲ್ಲಾ ತರಬೇತಿ ಆಯುಕ್ತರು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜಿನ ರೇಂಜರ್ಸ್, ಕಲ್ಲು ಕಟ್ಟಡ ರೋಟರಿ ವಿದ್ಯಾಸಂಸ್ಥೆಯ ಸ್ಕೌಟ್ಸ್-ಗೈಡ್ಸ್, ಮಹಿಳಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೇಂಜರ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾದ್ಯಂತ ಸ್ಕೌಟ್ಸ್-ಗೈಡ್ಸ್‌ಗಳು ಆಯಾ ಶಾಲೆ ವ್ಯಾಪ್ತಿಯಲ್ಲಿ ಮಹಾತ್ಮ ಗಾಂಧಿ ಜಯಂತಿ ಅಂಗವಾಗಿ ಪ್ಲಾಸ್ಟಿಕ್ ನಿಷೇಧ ಬಗ್ಗೆ ಅಭಿಯಾನ ಹಾಗೂ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಂಡಿದ್ದರು.



* ಕಾವೇರಿ ಪ್ರೌಢಶಾಲೆ ಶ್ರೀರಂಗಪಟ್ಟಣದ ಶ್ರೀ ಆದಿರಂಗ ಸ್ಕೌಟ್ ದಳದವರು ಗಾಂಧಿ ಜಯಂತಿ, ಲಾಲ್ ಬಹದ್ದೂರ್ ಶಾಸ್ತ್ರಿ ರವರ ಜನ್ಮ ದಿನಾಚರಣೆ ಪ್ರಯುಕ್ತ ಶ್ರಮದಾನ, ಭಜನೆ ಮತ್ತು ಸರ್ವಧರ್ಮ ಪ್ರಾರ್ಥನೆ ಮಾಡಿದರು.

* ಮದ್ದೂರಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳಾಗಿ ನೂತನವಾಗಿ ಆಗಮಿಸಿದ ಶ್ರೀ ಮಹದೇವು ಅವರಿಗೆ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಬೈರೇಗೌಡರು ಸ್ಕಾರ್ಫ್ ಧಾರಣೆ ಮಾಡಿ ಹೂಗುಚ್ಛ ಕೊಡುವುದರ ಮೂಲಕ ಅವರನ್ನು ಸ್ವಾಗತಿಸಿದರು.

* ಮಕ್ಕಳಲ್ಲಿ ವಿಶೇಷವಾಗಿ ಕಂಡುಬರುವ ಜಂತುಹುಳುವನ್ನು ನಿವಾರಣೆ ಮಾಡುವ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿರುವ ಭಾರತ್ ಸ್ಕೌಟ್ಸ್-ಗೈಡ್ಸ್‌ಗಳ ಸೇವೆ ಶ್ಲಾಘನೀಯ ಎಂದು ಶ್ರೀ ನಾರಾಯಣ್, ಪ್ರಾಂಶುಪಾಲರು ತಿಳಿಸಿದರು.

ರಾಷ್ಟ್ರೀಯ ಜಂತುಹುಳು ನಿವಾರಣಾ ದಿನ 25 ಸೆಪ್ಟೆಂಬರ್ 2019 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮಂಡ್ಯ ಇವರ ಸಹಯೋಗದಲ್ಲಿ ಮಹಿಳಾ ಸರ್ಕಾರಿ ವಿಶ್ವವಿದ್ಯಾನಿಲಯದ ಆವರಣದಲ್ಲಿ ಜಾಥಾ ಹಾಗೂ ಸಾರ್ವಜನಿಕರಿಗೆ ಅರಿವು ಮೂಡಿಸುವ ಕಾರ್ಯಕ್ರಮಕ್ಕೆ ಪ್ರೊಫೆಸರ್ ಶ್ರೀ ಕೆ.ಬಿ. ನಾರಾಯಣ್ ಪ್ರಾಂಶುಪಾಲರು (ಪ್ರಭಾರಿ) ಚಾಲನೆ ನೀಡಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ರೋಟರಿ ವಿದ್ಯಾ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್, ಮಹಿಳಾ ಸರ್ಕಾರಿ ಪದವಿ ಪೂರ್ವ ಕಾಲೇಜಿನ ರೇಂಜರ್ಸ್, ಮಹಿಳಾ ಸರ್ಕಾರಿ ವಿಶ್ವವಿದ್ಯಾನಿಲಯದ ರೇಂಜರ್ಸ್, ಶ್ರೀಮತಿ ಎಂ.ಎಸ್. ರೇಖಾ ಸಹಾಯಕ ಪ್ರಾಧ್ಯಾಪಕಿ ಮತ್ತು ರೇಂಜರ್ ಲೀಡರ್, ಶ್ರೀ ಎ.ವಿ. ವೀರಪ್ಪ ಅತಿಥಿ ಉಪನ್ಯಾಸಕರು, ಶ್ರೀಮತಿ ಜಯಲಕ್ಷ್ಮಿ ಗೌಡ, ತರಬೇತಿ ಆಯುಕ್ತೆ, ಶ್ರೀ ಜಯಶಂಕರ್ ಸ್ಕೌಟ್ ಮಾಸ್ಟರ್, ಶ್ರೀ ಮೋಹನ್ ಕುಮಾರ್, ಸ್ಕೌಟ್ ಮಾಸ್ಟರ್, ಕುಮಾರಿ ಕಾವ್ಯ, ಎಸ್.ಜಿ.ವಿ ಜಿಲ್ಲಾ ಸಂಘಟಕರು ಭಾಗವಹಿಸಿದ್ದರು.



## ರಾಯಚೂರು

ಅಕ್ಟೋಬರ್ 26ರಂದು "ಸ್ಕೌಟ್ಸ್-ಗೈಡ್ಸ್‌ಗಳ ನಡಿಗೆ ಕೃಷಿಯ ಕಡೆಗೆ" ಕಾರ್ಯಕ್ರಮವನ್ನು ಪ್ರಾರ್ಥನೆಯೊಂದಿಗೆ ಪ್ರಾರಂಭಿಸಲಾಯಿತು. ಈ ಕಾರ್ಯಕ್ರಮದಲ್ಲಿ ಸುಮಾರು 200 ಮಕ್ಕಳು ಭಾಗವಹಿಸಿದ್ದರು. ಶ್ರೀ ಪಿ.ಡಿ. ಭಜಂತ್ರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಿರುಗುಪ್ಪ, ಎಸ್.ಡಿ.ಸಿ. ಶ್ರೀ ಅಮೀನ್‌ರೆಡ್ಡಿ ಮತ್ತು ಕೃಷಿ ಸಂಶೋಧನಾ ಕೇಂದ್ರದ ಮುಖ್ಯಸ್ಥರು ಡಾಕ್ಟರ್ ಬಸವಣ್ಣಪ್ಪ ಎಂ.ಎ., ಅರ್ಥಶಾಸ್ತ್ರಜ್ಞರು ಡಾ. ಪ್ರಭುಲಿಂಗ ತೇವಿರಿ, ಹನುಮಂತಪ್ಪ ಡಿ. ಕ್ಷೇತ್ರ ಅಧೀಕ್ಷಕರು, ಶ್ರೀಮತಿ ಮಲ್ಲೇಶ್ವರಿ ಜೂಜುರಿ ಎ.ಎಸ್.ಓ.ಸಿ. ಬಳ್ಳಾರಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ನಟರಾಜಸ್ವಾಮಿ, ಖಜಾಂಚಿ ಜಿ. ಯೋಗೀಶ, ಸ್ಕೌಟ್-ಗೈಡ್ಸ್ ಶಿಕ್ಷಕ ಮತ್ತು ಶಿಕ್ಷಕಿಯರು ಭಾಗವಹಿಸಿದ್ದರು.

ಡಾ ಬಸವಣ್ಣಪ್ಪ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಮಕ್ಕಳು ಶಿಸ್ತನ್ನು ಅಳವಡಿಸಿಕೊಂಡು ಮುಂದೆ ಸಾಗಿದರೆ ಮುಂದೊಂದಿನ ನೀವು ಕೃಷಿ ತಜ್ಞರು ಆದಾಗ ಬಾಲ್ಯದ ನೆನಪಾಗುತ್ತದೆಂದು ಹೇಳಿದರು.

ಶ್ರೀ ಪ್ರಭುಲಿಂಗ ತೇವಿರಿಯವರು ಏಕದಳ, ದ್ವಿದಳ, ನಾರು ಹೊಂದಿದ ತರಕಾರಿಗಳ ಬಗ್ಗೆ ಅವುಗಳಲ್ಲಿರುವ ವಿಟಮಿನ್ಸ್ ಬಗ್ಗೆ ಆಧುನಿಕ ಯಂತ್ರೋಪಕರಣಗಳ ಬಗ್ಗೆ ವಿವರವಾಗಿ ತಿಳಿಸಿದರು.

ಶ್ರೀ ಹನುಮಂತಪ್ಪ ರವರು ಎರೆಹುಳು ಗೊಬ್ಬರದ ಬಗ್ಗೆ, ಮಳೆ ಆಧಾರಿತ ಬೆಳೆಗಳು, ನವಣೆ, ರಾಗಿ, ಮೆಕ್ಕೆ ಜೋಳ ಅವುಗಳ ಬಗ್ಗೆ ಉಪಯೋಗ ಮತ್ತು ವಿಟಮಿನ್ಸ್ ಬಗ್ಗೆ ತಿಳಿಸಿ. ನಂತರ ಮಣ್ಣು ಪರೀಕ್ಷೆ ಕೇಂದ್ರ ಇನ್ನಿತರ ಬೀಜಗಳ ಬಗ್ಗೆ ತಿಳಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ಸ್ಕೌಟ್ಸ್-ಗೈಡ್ಸ್‌ಗಳು ಬೇರೆ ಮಕ್ಕಳಿಗಿಂತ ಎಲ್ಲಾ ಚಟುವಟಿಕೆಯಲ್ಲಿ ವಿಭಿನ್ನರಾಗಿ ಶಿಸ್ತಿನಿಂದ ಕಲಿಯುತ್ತಾರೆ ಎಂದರು.

* ಅಕ್ಟೋಬರ್ 26 ರಂದು "ಪುಟಾಣಿ ಪೋಲೀಸ್" ಕಾರ್ಯಕ್ರಮದ ಅಂಗವಾಗಿ ಪೋಲೀಸ್ ಠಾಣೆ ಸಿರುಗುಪ್ಪದಲ್ಲಿ ಶ್ರೀ ಗಂಗಪ್ಪ ಬರ್ಲಿ, ಪಿ.ಎಸ್.ಐ. ರವರು ರಸ್ತೆ ನಿಯಮಗಳು, ಲೈಸೆನ್ಸ್, ನಂತರ ಇಲಾಖೆಯ ಎಲ್ಲಾ ಹಂತದ ಅಧಿಕಾರಿಗಳ ಬಗ್ಗೆ ಸವಿಸ್ತಾರವಾಗಿ ತಿಳಿಸಿದರು. ಶ್ರೀಮತಿ ಮಲ್ಲೇಶ್ವರಿ ಜುಜೂರಿ ರವರು ಮಕ್ಕಳಿಗೆ ಇರುವಂತಹ ಎಲ್ಲಾ ಕಾರ್ಯಕ್ರಮಗಳನ್ನು ಪ್ರಾಯೋಗಿಕವಾಗಿ ಮಾಡಿಸಿದಾಗ ಈ ಸಂಸ್ಥೆಯ ಇನ್ನೂ ಹೆಚ್ಚಿನ ಮಟ್ಟದಲ್ಲಿ ಬೆಳೆಯುತ್ತದೆಂದು ತಿಳಿಸಿದರು. ಶ್ರೀ ತಿಮ್ಮಣ್ಣ ನಾಯಕ ಪ್ರೊಭೇಷನರಿ ಪಿ.ಎಸ್.ಐ., ಹಾಗೂ ಹೆಡ್ ಕಾನ್ಸ್‌ಟೇಬಲ್ ಶ್ರೀ ಕೃಷ್ಣಮೂರ್ತಿ ಹಾಗೂ ಪಿ.ಸಿ. ಶ್ರೀ ಆನಂದ ಇವರೆಲ್ಲರೂ ಟ್ರಾಫಿಕ್ ರೂಲ್ಸ್‌ನ್ನು ಪ್ರಾಯೋಗಿಕವಾಗಿ ಮಕ್ಕಳಿಂದ ಮಾಡಿಸಿದರು.



## ಶಿರಸಿ

ನವೆಂಬರ್ 16ರಂದು ಜಿಲ್ಲಾ ಸಂಸ್ಥೆ ವತಿಯಿಂದ ನಗರದ ಎಂ.ಇ.ಎಸ್. ಚೈತನ್ಯ ಪದವಿ ಪೂರ್ವ ಕಾಲೇಜಿನಲ್ಲಿ ಜಿಲ್ಲಾ ಮಟ್ಟದ ಮಕ್ಕಳ ಹಬ್ಬವನ್ನು ಸಂಘಟಿಸಲಾಯಿತು. ಪ್ರಾಥಮಿಕ ಶಾಲೆಯ ವಿಭಾಗದ ಸ್ಕೌಟ್‌ಗಳಿಗೆ ಮತ್ತು ಪ್ರೌಢಶಾಲೆಯ ವಿಭಾಗದ ಸ್ಕೌಟ್‌ಗಳಿಗೆ ಗಾಳಿಪಟ ಸ್ಪರ್ಧೆಯನ್ನು, ಪ್ರಾಥಮಿಕ ವಿಭಾಗದ ಗೈಡ್‌ಗಳಿಗೆ ನಿಸರ್ಗದ ಚಿತ್ರ ಬಿಡಿಸುವ ಸ್ಪರ್ಧೆ ಮತ್ತು ಪ್ರೌಢಶಾಲೆಯ ವಿಭಾಗದ ಗೈಡ್‌ಗಳಿಗೆ ಸ್ವಾತಂತ್ರ್ಯ ಹೋರಾಟಗಾರರ ಚಿತ್ರವನ್ನು ಬಿಡಿಸುವ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.



ಶ್ರೀ ಆರ್.ಎಂ. ಭಟ್, ಪ್ರಾಂಶುಪಾಲರು, ಎಂ.ಇ.ಎಸ್ ಚೈತನ್ಯ ಪದವಿ ಪೂರ್ವ ಕಾಲೇಜು ರವರು ಕಾರ್ಯಕ್ರಮವನ್ನು ಉದ್ಘಾಟಿಸಿ 'ನಾನು ಬೆಳಗಿದ ದೀಪ ನಮ್ಮ ದೇಶದ ಸಂಸ್ಕೃತಿ ಬೆಳಗುವ ದೀಪವಾಗಲಿ, ನಿಮ್ಮ ತಂದೆ-ತಾಯಿಯವರನ್ನು ಗೌರವಿಸುವ ದೀಪವಾಗಲಿ, ಗುರು-ಹಿರಿಯರನ್ನು ಪೂಜಿಸುವ ದೀಪವಾಗಲಿ' ಎಂದು ಹೇಳಿದರು. ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮತಿ ಮಂಗಲಾ ಬಗಲಿ, ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಛೇರಿ, ಶಿರಸಿ ಇವರು ಎಲ್ಲಾ ಮಕ್ಕಳಿಗೆ ಶುಭ ಹಾರೈಸಿದರು. ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀಮತಿ ಸೂರಜ್ ರಾಣಿ ಪ್ರಭು, ಉಪಾಧ್ಯಕ್ಷರು ಭಾ.ಸ್ಕೌ.ಗೈ. ಶಿರಸಿ ಇವರು ಮಾತನಾಡಿ "ನಮ್ಮ ದೇಶಿಯ ಕ್ರೀಡೆಗಳನ್ನು ಉಳಿಸಿ ಬೆಳೆಸುವುದು ಅತ್ಯಗತ್ಯವಾಗಿದೆ. ಜಿಲ್ಲಾ ಮಟ್ಟದ ಸ್ಪರ್ಧೆಯಲ್ಲಿ

ಭಾಗವಹಿಸುತ್ತಿರುವ ಸ್ಕೌಟ್-ಗೈಡ್‌ಗಳಿಗೆ ಶುಭವಾಗಲಿ" ಎಂದರು. ಶ್ರೀ ಎಂ.ಎಂ. ಭಟ್ ಜಿಲ್ಲಾ ಮುಖ್ಯ ಆಯುಕ್ತರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ವಿ.ಹೆಚ್. ಭಟ್ಕಳ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ವಂದಿಸಿದರು. ಶ್ರೀ ವಿರೇಶ್ ಮಾದರ್ ಜಿಲ್ಲಾ ಸಂಘಟಕರು ಕಾರ್ಯಕ್ರಮವನ್ನು ನಿರೂಪಸಿದರು.

ಶ್ರೀ ಎಸ್.ಎಸ್. ಭಾಗವತ್ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ ಶಿರಸಿ ವಿಜೇತರು ಯಾದಿಯನ್ನು ಓದಿದರು. ಶ್ರೀ ಮಾರುತಿ ಉಪ್ಪಾರ್, ಜಿಲ್ಲಾ ಕಾರ್ಯದರ್ಶಿಗಳು ವಂದಿಸಿದರು. ಶ್ರೀ ಜಿ.ಜಿ. ಹೆಗಡೆ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ ಸಿದ್ಧಾಪುರ ಕಾರ್ಯಕ್ರಮವನ್ನು ನಿರೂಪಿಸಿದರು.

## ಶಿವಮೊಗ್ಗ

ಸೆಪ್ಟೆಂಬರ್ 30 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಶಿವಮೊಗ್ಗ ಜಿಲ್ಲಾ ಸಂಸ್ಥೆ ಮಾಜಿ ಜಿಲ್ಲಾ ಆಯುಕ್ತರಾಗಿ ಕಾರ್ಯನಿರ್ವಹಿಸಿದ್ದ ಶ್ರೀಮತಿ ಲಕ್ಷ್ಮೀ ಶಾಸ್ತ್ರಿ ರವರು ಹಾಗೂ ಮಾಜಿ ಜಿಲ್ಲಾ ಜಂಟಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದ ಶ್ರೀಮತಿ ನಿರ್ಮಲ ಬಸವರಾಜ್ ದಿನಾಂಕ ಅಕ್ಟೋಬರ್ 31ರಂದು ನಮ್ಮನ್ನೆಲ್ಲ ಅಗಲಿರುವುದು ಜಿಲ್ಲಾ ಸಂಸ್ಥೆಗೆ ತುಂಬಲಾರದ ನಷ್ಟವಾಗಿದೆ. ಅವರು ಅಪಾರ ಬಂಧು-ಬಳಗ ಹಾಗೂ ಮಿತ್ರರನ್ನು ಅಗಲಿದ್ದು, ಅವರ ಆತ್ಮಕ್ಕೆ ಶಾಂತಿ ನೀಡಲು, ಅವರ ಕುಟುಂಬದವರಿಗೆ ಮತ್ತು ಬಂಧು ಮಿತ್ರರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಅಕ್ಟೋಬರ್ 31 ರ ಗುರುವಾರದಂದು ಸಂಜೆ 6.30ಕ್ಕೆ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿಯವರ ಅಧ್ಯಕ್ಷತೆಯಲ್ಲಿ ಸಂತಾಪನ ಸಭೆ ಸೇರಿ ಮೌನಾಚರಣೆಯ ಮೂಲಕ ಪ್ರಾರ್ಥಿಸಲಾಯಿತು.



* ಅಕ್ಟೋಬರ್ 2ರಂದು ಜಿಲ್ಲಾ ಸಂಸ್ಥೆಯ ವತಿಯಿಂದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ 150ನೇ ವರ್ಷದ ಜನ್ಮ ದಿನಾಚರಣೆ ಮತ್ತು ಸ್ವಾತಂತ್ರ್ಯ ನಂತರದ ಭಾರತದ ಎರಡನೇ ಪ್ರಧಾನಿಯಾದಂತಹ ಲಾಲ್ ಬಹಾದ್ದೂರ್ ಶಾಸ್ತ್ರೀಯವರ 115ನೇ ವರ್ಷದ ಜನ್ಮ ದಿನಾಚರಣೆಯನ್ನು ಸ್ಕೌಟ್ ಭವನದಲ್ಲಿ ಆಚರಿಸಲಾಯಿತು. ಕರ್ನಾಟಕ ರಾಜ್ಯ



ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಹಸಿರು ನಿಶಾನೆಯನ್ನು ತೋರಿಸುವುದರ ಮೂಲಕ ಕಬ್-ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳ ಪಥ ಸಂಚಲನಕ್ಕೆ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪ ಗೌಡ ಮತ್ತು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿಯವರು ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶಿವಮೊಗ್ಗ ನಗರದ ಪ್ರಮುಖ ಬೀದಿಗಳಲ್ಲಿ ಗಾಂಧೀಜಿಯವರ ಪುತ್ಥಳಿ ಮತ್ತು ವಾದ್ಯದೊಂದಿಗೆ ಸಂಚಲನ ನಡೆಸಲಾಯಿತು. ಈ ಮೆರವಣಿಗೆಯಲ್ಲಿ ಜಿಲ್ಲಾ ಪದಾಧಿಕಾರಿಗಳು ಸ್ಕೌಟರ್ಸ್-ಗೈಡರ್ಸ್, ಕಬ್-ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್ಸ್-ರೇಂಜರ್ಸ್‌ಗಳು ಹಾಜರಿದ್ದರು.

ನಂತರ ಗಾಯಿತ್ರಿ ಮಾಂಗಲ್ಯ ಮಂದಿರದಲ್ಲಿ ಸರ್ವಧರ್ಮ ಪ್ರಾರ್ಥನೆಯು ನಡೆಯಿತು. ಗಣ್ಯ ವ್ಯಕ್ತಿಗಳು ದೀಪ ಬೆಳಗಿಸಿ ಗಾಂಧೀಜಿಯವರ ಪುತ್ಥಳಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರಿಯುವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾದ ಶ್ರೀ ಡಿ.ಹೆಚ್. ಶಂಕರಮೂರ್ತಿ, ಮಾಜಿ ಸಭಾಪತಿಗಳು ಕರ್ನಾಟಕ ವಿಧಾನ ಪರಿಷತ್ ಬೆಂಗಳೂರು ರವರು ಸ್ವಾತಂತ್ರ್ಯ ಸುಲಭವಾಗಿ ಸಿಕ್ಕಿರುವಂತದ್ದಲ್ಲ ಸಾಕಷ್ಟು ಜನರ ತ್ಯಾಗ, ಕಾರಾಗೃಹ ಸೇವೆ ಮತ್ತು ಪ್ರಾಣತ್ಯಾಗದಿಂದ ದೊರೆತಿರುವುದಾಗಿ ಗಾಂಧೀಜಿಯವರ ತತ್ವ ಮತ್ತು ಆದರ್ಶಗಳನ್ನು ಯುವ ಜನತೆ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು,



ಸ್ವಚ್ಛ ಭಾರತ ನಿರ್ಮಾಣ ಗಾಂಧೀಜಿಯವರ ಕನಸು, ಅದೇ ರೀತಿ ಮತ್ತೊಬ್ಬ ಸ್ವಾತಂತ್ರ್ಯ ಹೋರಾಟಗಾರ ಲಾಲ್ ಬಹದ್ದೂರ್ ಶಾಸ್ತ್ರಿಯವರು ಸಹ ಸ್ವಾತಂತ್ರ್ಯಕ್ಕಾಗಿ ಹೋರಾಡಿ "ರೈತರೆ ದೇಶದ ಬೆನ್ನೆಲುಬು" ಎಂಬುದನ್ನು ದೇಶಕ್ಕೆ ಸಾರಿ ಹೇಳಿದ ಮಹಾನ್ ವ್ಯಕ್ತಿಯಾಗಿದ್ದಾರೆ ಎಂದು ನುಡಿದರು. ಕರ್ನಾಟಕ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ವಿಶ್ವ ಶಾಂತಿಗಾಗಿ ಜೀವನವನ್ನು ತ್ಯಾಗಮಾಡಿ ಸತ್ಯವನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದ ಮಹಾನ್ ವ್ಯಕ್ತಿ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ದಿನಾಚರಣೆಯನ್ನು ಕೇವಲ ಭಾರತದಲ್ಲಷ್ಟೆ ಅಲ್ಲದೇ ವಿಶ್ವ ಸಂಸ್ಥೆಯಲ್ಲಿ ಆಚರಿಸಲಾಗುತ್ತಿರುವುದು ಹೆಮ್ಮೆಯ ಸಂಗತಿ. ಜೈ ಜವಾನ್ ಜೈ ಕಿಸಾನ್ ಎಂಬ ಉಕ್ತಿಯಿಂದ ಎಲ್ಲಾ ರೈತರನ್ನು ಒಟ್ಟುಗೂಡಿಸಿ. ಬಡತನದಲ್ಲಿ ಬಂದು ಬರಿಗಾಲಲ್ಲಿ ಸ್ವಾತಂತ್ರ್ಯಕ್ಕೆ ಹೋರಾಡಿದ ಮತ್ತೊಬ್ಬ ಹೋರಾಟಗಾರ ಲಾಲ್ ಬಹದ್ದೂರ್ ಶಾಸ್ತ್ರಿಯವರು ಇವರು ಸ್ವತಂತ್ರ ಭಾರತದ ಎರಡನೆ ಪ್ರಧಾನ ಮಂತ್ರಿಯಾಗಿ ಸೇವೆಸಲ್ಲಿಸಿದ್ದಾರೆ ಎಂದು ನುಡಿದರು. ಈ ಕಾರ್ಯಕ್ರಮದ ಅತಿಥಿಗಳಾದ ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪ ಗೌಡ ರವರು ನನ್ನ ಜೀವನವೇ ನನ್ನ ಸಂದೇಶ ಎಂಬ ಗಾಂಧೀಜಿಯವರ ಉಕ್ತಿಯಂತೆ ನಾವು ಕೂಡ ಬದುಕಬೇಕು ನಮ್ಮ ಜೀವನ ಮತ್ತೊಬ್ಬರಿಗೆ ಉತ್ತಮ ಸಂದೇಶವನ್ನು ನೀಡುವಂತಿರಬೇಕು. ಶಿಕ್ಷಣದಿಂದ ಮಾತ್ರ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆ ಸಾಧ್ಯ. ಎಂದು ನುಡಿದರು. ಈ ಕಾರ್ಯಕ್ರಮದ ಅಧ್ಯಕ್ಷರಾದ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿಯವರು ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿಯಂತಹ ಗಣ್ಯ ವ್ಯಕ್ತಿಗಳು ನೀಡಿರುವ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಂಡು ಬಾಳನ್ನು ಬಂಗಾರ ಮಾಡಿಕೊಳ್ಳಬೇಕು ಎಂದು ನುಡಿದರು.

ನಂತರ ಜಿಲ್ಲಾ ಮಟ್ಟದ ನಿಪುಣ್ ಪರೀಕ್ಷಾ ಶಿಬಿರದಲ್ಲಿ ಉತ್ತೀರ್ಣರಾದ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀಮತಿ ಭಾರತಿ ಡಯಾಸ ಎ.ಎಸ್.ಓ.ಸಿ. ಹಾಗೂ ವಂದನಾರ್ಪಣೆಯನ್ನು ಜಿಲ್ಲಾ ಖಜಾಂಚಿ ಶ್ರೀ ಚೂಡಾಮಣಿ. ಈ ಪವಾರ್ ರವರು ನೆರವೇರಿಸಿಕೊಟ್ಟರು.

## ತುಮಕೂರು

ಅಕ್ಟೋಬರ್ 30 ರಂದು ಜಿಲ್ಲಾ ಸಂಸ್ಥೆಯ ವತಿಯಿಂದ ಪಾಕಶಾಲೆ ಮತ್ತು ಬಿಡಾರ ಸಮುಚ್ಚಯದ ಶಿಲಾನ್ಯಾಸ ಕಾರ್ಯಕ್ರಮವನ್ನು ಜಿಲ್ಲಾ ತರಬೇತಿ ಕೇಂದ್ರ ಬೆಳಗುಂಬದಲ್ಲಿ ಹಮ್ಮಿಕೊಳ್ಳಲಾಯಿತು. ಈ ಶಿಲಾನ್ಯಾಸವನ್ನು ಶ್ರೀ ಜೆ.ಸಿ. ಮಾಧುಸ್ವಾಮಿ, ಮಾನ್ಯ ಕಾನೂನು ಸಂಸದೀಯ



ವ್ಯವಹಾರಗಳು ಸಣ್ಣ ನೀರಾವರಿ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ಕರ್ನಾಟಕ ನೆರವೇರಿಸಿದರು. ತುಮಕೂರು ಗ್ರಾಮಾಂತರ ಶಾಸಕರಾದ ಶ್ರೀ ಡಿ.ಸಿ. ಗೌರಿಶಂಕರ್ ರವರು ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾ ಪ್ರಸನ್ನಕುಮಾರ್, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಬಿ.ಆರ್. ವೇಣುಗೋಪಾಲಕೃಷ್ಣ. ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಸುಭಾಷಿಣಿ ಆರ್. ಕುಮಾರ್ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸುರೇಂದ್ರ ಎ. ಷಾ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಹ್ಯಾಂ ರೇಡಿಯೋದ ಉದ್ಘಾಟನೆಯನ್ನು ಶ್ರೀ ಗೌರಿಶಂಕರ್. ಮಾನ್ಯ ಜಿಲ್ಲಾಧಿಕಾರಿಗಳು ನೆರವೇರಿಸಿದರು.

## ಉಡುಪಿ

ಸೆಪ್ಟೆಂಬರ್ 9 ರಿಂದ 21ರ ವರೆಗೆ ಜಿಲ್ಲಾ ಮಟ್ಟದ ರೇಂಜರ್ ನಿಪುಣ್ ಪರೀಕ್ಷಾ ಶಿಬಿರ ಡಾ॥ ವಿ.ಎಸ್. ಆಚಾರ್ಯ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ ಮಣಿಪಾಲ ಇಲ್ಲಿ ನಡೆಯಿತು. ಶಿಬಿರದ ನಾಯಕರಾಗಿ ಶ್ರೀ ರಾಜೇಶ್ ಅವಲಕ್ಕಿ ಎ.ಎಲ್.ಟಿ. (ರೋವರ್) ನಡೆಸಿಕೊಟ್ಟರು. ಜಿಲ್ಲೆಯ ವಿವಿಧ ಕಾಲೇಜುಗಳಿಂದ 100 ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಹಾಗೂ ಶ್ರೀಮತಿ ಸುಮನ್ ಶೇಖರ್ ಕಾರ್ಯಕ್ರಮವನ್ನು ಸಂಘಟಿಸಿದರು.

ಉತ್ತಮ ಸಮಾಜ ನಿರ್ಮಾಣವು ಶಿಕ್ಷಕರಿಂದ ಮಾತ್ರ ಸಾಧ್ಯ ಎಂದು ಶ್ರೀಮತಿ ಜ್ಯೋತಿ ಜೆ.ಪೈ. ಜಿಲ್ಲಾ ಗೈಡ್ಸ್ ಆಯುಕ್ತರು ನುಡಿದರು. ಡಾ. ವಿ.ಎಸ್. ಆಚಾರ್ಯ, ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ ಮಣಿಪಾಲ ಇಲ್ಲಿ ಅಕ್ಟೋಬರ್ 9 ರಿಂದ 15ರ ವರೆಗೆ ನಡೆದ ಜಿಲ್ಲಾ ಮಟ್ಟದ ಕಬ್, ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿ ನುಡಿದರು. ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ



ಸಾರ್ವಜನಿಕ ಶಿಕ್ಷಣ ಇಲಾಖೆ ಉಡುಪಿಯ ಉಪನಿರ್ದೇಶಕ ಶ್ರೀ ಶೇಷಶಯನ ಕಾರಿಂಜ, ಜಿಲ್ಲಾ ದೈಹಿಕ ಪರಿವೀಕ್ಷಕ ಶ್ರೀ ಮದುಕರ್, ಜಿಲ್ಲಾ ಆಯುಕ್ತರು ಡಾ॥ ವಿಜಯೇಂದ್ರ ವಸಂತ್ ಹಾಗೂ 4 ಶಿಬಿರಗಳ ನಾಯಕರಾದ ಶ್ರೀ ಕೊಗ್ಗ ಗಾಣಿಗ, ಶ್ರೀ ವಿ.ಎಂ. ನಾರಾಯಣ ಸ್ವಾಮಿ, ಶ್ರೀಮತಿ ಸುಮನ್ ಶೇಖರ್, ಶ್ರೀಮತಿ ವಿಮಲಾ ಬಾಯಿ ಉಪಸ್ಥಿತರಿದ್ದರು.

ಸಂಪನ್ಮೂಲ ವ್ಯಕ್ತಿ ಶ್ರೀ ಡ್ಯಾನಿಯಲ್ ಸುಕುಮಾರ್ ದಾಸ್ ಸ್ವಾಗತಿಸಿದರು. ಜಿಲ್ಲಾ ಸಂಘಟಕ ಶ್ರೀ ನಿತಿನ್ ಅಮಿನ್ ಧನ್ಯವಾದ ನೀಡಿದರು. ಶ್ರೀಮತಿ ಪಾರ್ವತಿ (ಸಹಬೋದಕಿ) ಕಾರ್ಯಕ್ರಮ ನಿರೂಪಿಸಿದರು.

ಶಿಬಿರದ ಸಮಯದಲ್ಲಿ ಉಡುಪಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಮಂಜುಳಾ, ಬ್ರಹ್ಮಾವರ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಒ.ಆರ್. ಪ್ರಕಾಶ್, ಬ್ರಹ್ಮಾವರ ಕ್ಷೇತ್ರ ಸಂಪನ್ಮೂಲ ವ್ಯಕ್ತಿ ಶ್ರೀ ನಾಗರಾಜ್ ದೈಹಿಕ ಶಿಕ್ಷಣಾಧಿಕಾರಿ ಗಳಾದ ಶ್ರೀ ಭುಜಂಗ ಶೆಟ್ಟಿ ಭೇಟಿ ನೀಡಿದರು.

* "ಮಹಾತ್ಮಾ ಗಾಂಧೀಜಿ ಕಂಡ ಸ್ವಚ್ಛ ಭಾರತದ ಕನಸನ್ನು ನನಸಾಗಿಸುವುದು ನಮ್ಮೆಲ್ಲರ ಹೊಣೆ, ಪರಿಸರವನ್ನು ಸ್ವಚ್ಛವಾಗಿರುವುದು ಕೂಡಾ ದೇಶ ಸೇವೆಯೇ, ದೇಶ ಕಟ್ಟುವ ಕಾರ್ಯದಲ್ಲಿ ಸ್ವಚ್ಛತಾ ಅಭಿಯಾನವು ಒಂದು ಮಹತ್ವದ ಕಾರ್ಯ" ಎಂದು ಕೇಂದ್ರ ರಾಸಾಯನಿಕ ಮತ್ತು ರಸಗೊಬ್ಬರ ಸಚಿವ ಶ್ರೀ ಡಿ.ವಿ. ಸದಾನಂದ ಗೌಡ ಹೇಳಿದರು.

ಉಡುಪಿ ಜಿಲ್ಲಾಡಳಿತ, ಉಡುಪಿ ಹಾಗೂ ಮಲ್ಪೆ ಅಭಿವೃದ್ಧಿ ಸಮಿತಿ, ಉಡುಪಿ ನಗರ ಸಭೆ, ಪ್ರವಾಸೋದ್ಯಮ ಇಲಾಖೆ ದ.ಕ. ಮತ್ತು ಉಡುಪಿಜಿಲ್ಲಾ ಮೀನು ಮಾರಾಟ ಫೆಡರೇಶನ್ನಿನ ಸಹಯೋಗದೊಂದಿಗೆ ಮಲ್ಪೆ -ಪಡುಕೆರೆ ಬೀಚ್ ಸ್ವಚ್ಛತಾ ಅಭಿಯಾನ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು.



ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಸ್ಥಳೀಯ ಸ್ಕೌಟ್ಸ್-ಗೈಡ್ಸ್ ದಳಗಳಿಂದ 300 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ಮಲ್ಪೆ-ಪಡುಕೆರೆ ಕಡಲತೀರವನ್ನು ಸ್ವಚ್ಛಗೊಳಿಸಿದರು.

ಈ ಕಾರ್ಯಕ್ರಮದಲ್ಲಿ ಶಾಸಕರಾದ ಶ್ರೀ ಕೆ. ರಘುಪತಿ ಭಟ್ ಲಾಲಾಜಿ, ಶ್ರೀ ಆರ್. ಮೆಂಡನ್ ಹಾಗೂ ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಜಗದೀಶ್ ಮತ್ತು ಇತರ ಗಣ್ಯ ವ್ಯಕ್ತಿಗಳು ಉಪಸ್ಥಿತರಿದ್ದರು.

* ನವೆಂಬರ್ 16 ರಿಂದ 17ರ ವರೆಗೆ ಜಿಲ್ಲಾ ಸಂಸ್ಥೆ ಉಡುಪಿ ಕಾಪು ಹಾಗೂ ಶ್ರೀ ಆನಂದತೀರ್ಥ ವಿದ್ಯಾಲಯ ಪಾಜಕ ಕ್ಷೇತ್ರ, ಉಡುಪಿ ಜಿಲ್ಲೆ ಇವರ ಜಂಟಿ ಆಶ್ರಯದಲ್ಲಿ ಕಬ್-ಬುಲ್‌ಬುಲ್ ಉತ್ಸವವನ್ನು ನಡೆಸಲಾಯಿತು. ಎರಡು ದಿನಗಳ ಕಾಲ ನಡೆದ ಶಿಬಿದಲ್ಲಿ 500ಕ್ಕಿಂತಲೂ ಹೆಚ್ಚಿನ ಕಬ್ಸ್-ಬುಲ್‌ಬುಲ್ ಶಿಕ್ಷಕ-ಶಿಕ್ಷಕಿಯರು, ಸ್ವಯಂಸೇವಕರು, ಭಾಗವಹಿಸಿದ್ದರು.

ಶಿಬಿರದ ಉದ್ಘಾಟನೆಯನ್ನು ಶ್ರೀಶ್ರೀ ವಿಶ್ವ ಪ್ರಸನ್ನತೀರ್ಥ ಶ್ರೀ ಪಾದರು, ಶ್ರೀ ಪೇಜಾವರ ಮಠ, ಉಡುಪಿ ಇವರು ನೆರವೇರಿಸಿ ಆಶೀರ್ವದಿಸಿದರು.

ಸಂಸ್ಥೆಯ ಆಡಳಿತ ಮಂಡಳಿಯ ಅಧ್ಯಕ್ಷರಾದ ಶ್ರೀ ಎನ್. ನಾಗರಾಜ ಬಲ್ಲಾಳ್, ಇಂತಹ ಶಿಬಿರಗಳು ಮಕ್ಕಳಲ್ಲಿ ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳಲು ಕಲಿಯುವರು ಹಾಗೂ ಇಂತಹ ಶಿಬಿರವನ್ನು ಈ ಪರಿಸರಲದಲಿ ಹಮ್ಮಿಕೊಂಡಾಗ ಮಕ್ಕಳು ತುಂಬಾ ಸಂತೋಷ ಪಡುವರು ಎಂದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತೆ, ಶ್ರೀಮತಿ ಶಾಂತಾ ವಿ. ಆಚಾರ್ಯ ಇಂತಹ ಶಿಬಿರದಲ್ಲಿ ನಾನು ಭಾಗವಹಿಸಿದಾಗ ನನಗೆ ತುಂಬಾ ಸಂತೋಷ ಹಾಗೂ ನಾನು ಅವರೊಂದಿಗೆ ಮಕ್ಕಳಾಗಿ ಬೆರೆಯುವೆನು ಎಂದರು. ಜಿಲ್ಲಾ ಸ್ಕೌಟ್ಸ್ ಆಯುಕ್ತ ಡಾ. ವಿಜಯೇಂದ್ರ ವಸಂತ್ ಶ್ರೀಮತಿ ಜ್ಯೋತಿ ಜೆ.ಪೈ. ಜಿಲ್ಲಾ ಗೈಡ್ಸ್ ಆಯುಕ್ತರು ಮುಖ್ಯ ಅತಿಥಿಯಾಗಿ



ಭಾಗವಹಿಸಿದ್ದರು. ಶಾಲಾ ಪ್ರಾಂಶುಪಾಲರಾದ ಶ್ರೀಮತಿ ಗೀತಾ ಎಸ್. ಕೋಟ್ಯಿಯನ್ ಎಲ್ಲರನ್ನು ಸ್ವಾಗತಿಸಿದರು. ಶಿಬಿರದ ಮುನ್ನೋಟವನ್ನು ನಾಯಕಿಯಾದ ಶ್ರೀ ಕಾಂತಿ ನೀಡಿದರು. ಶ್ರೀಮತಿ ವಿದ್ಯಾ ಇವರು ಧನ್ಯವಾದ ನೀಡಿದರು. ಶ್ರೀ ಬಿ. ಆನಂದ ಅಡಿಗ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌ) ಕಾರ್ಯಕ್ರಮ ನಿರೂಪಿಸಿದರು. ಜಿಲ್ಲಾ ತರಬೇತಿ ಆಯುಕ್ತರು (ಗೈ) ಶ್ರೀಮತಿಸಾವಿತ್ರಿ ಮನೋಹರ್, ಶ್ರೀಮತಿ ರೂಪ ಬಲ್ಲಾಳ್ ಆಡಳಿತ ಮಂಡಳಿಯ ಸದಸ್ಯರು ಶ್ರೀಮತಿ ಜ್ಯೋತಿ, ಬುಲ್‌ಬುಲ್ ವಿಭಾಗದ ನಾಯಕಿ, ಡಾ. ಜಯರಾಮ್ ಶೆಟ್ಟಿಗಾರ್ ವೇದಿಕೆಯಲ್ಲಿ ಉಪಸ್ಥಿತರಿದ್ದರು.

* ಅಕ್ಟೋಬರ್ 19 ಮತ್ತು 20 ರಂದು ಜಿಲ್ಲಾ ಮಟ್ಟದ ಜೋಟ–ಜೋಟಿ ಕಾರ್ಯಕ್ರಮವನ್ನು ಡಾ॥ ವಿ.ಎಸ್. ಆಚಾರ್ಯ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ ಮಣಿಪಾಲ ಇಲ್ಲಿ ಹಮ್ಮಿಕೊಳ್ಳಲಾಯಿತು. ಸ್ಕೌಟ್ಸ್–ಗೈಡ್ಸ್, ರೋವರ್–ರೇಂಜರ್ಸ್‌ಗಳ ಮೂಲಕ ದೇಶ ವಿದೇಶ ಸ್ಕೌಟ್ಸ್–ಗೈಡ್ಸ್ ಜೊತೆ ವಿಚಾರ ವಿನಿಮಯ ಕಲೆ ಸಂಸ್ಕೃತಿಯ ಬಗ್ಗೆ ತಿಳಿದುಕೊಂಡರು. ಕೆ.ಎಂ.ಸಿ. ಉದ್ಯೋಗಿ ಯಾದ ಶ್ರೀ ಕಾಂತ್, ಶ್ರೀ ಸೋಮಶೇಖರ್ ಭಟ್, ಶ್ರೀ ರಾಜೀವನ್ ಇವರು ಜೋಟ ಜೋಟಿ ನಡೆಸಿಕೊಟ್ಟರು.

ನಿಟ್ಟೆ ವಿದ್ಯಾಲಯದಲ್ಲೂ ಜೋಟ–ಜೋಟಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು ಕಾರ್ಕಳ ವಲಯದ ಸ್ಕೌಟ್ಸ್–ಗೈಡ್ಸ್ ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ತರಬೇತಿ



ಆಯುಕ್ತ ಶ್ರೀ ಬಿ. ಆನಂದ್ ಅಡಿಗ, ಶ್ರೀ ವಿತೇಶ್ ಕಾಂಚನ್ ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಹಾಗೂ ಶ್ರೀಮತಿ ಸುಮನ್ ಶೇಖರ್ ಕಾರ್ಯಕ್ರಮ ಸಂಘಟಿಸಿದರು.

## ವಿಜಯಪುರ

ಅಕ್ಟೋಬರ್ 16 ರಿಂದ 20 ರ ವರೆಗೆ ಸ್ಕೌಟ್ಸ್–ಗೈಡ್ಸ್ ರಾಜ್ಯಪುರಸ್ಕಾರ ಪರೀಕ್ಷಾ ಶಿಬಿರವು ಶ್ರೀ ವಾಸಂತಿಬಾಯಿ ಜಿಗಜಿಣಿ, ಭಾರತ್ ಸ್ಕೌಟ್ಸ್–ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಬುರುಣಾಪೂರ ತಾ.ಜಿ. ವಿಜಯಪುರ ಇಲ್ಲಿ ನಡೆಸಲಾಯಿತು. ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಕೆ.ಜಿ. ಗೋಪಾಲಕೃಷ್ಣ ಎಲ್.ಟಿ.(ಎಸ್.)ರವರು ಗೈಡ್ ವಿಭಾಗದ ನಾಯಕರಾಗಿ ಶ್ರೀಮತಿ ವಜ್ರಗಂಗಮ್ಮ ಕಾರ್ಯ ನಿರ್ವಹಿಸಿದರು.

ಶಿಬಿರವನ್ನು ಅಕ್ಟೋಬರ್ 16ರಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ರಾಜ್ಯ ಕಾರ್ಯದರ್ಶಿ ಶ್ರೀ ಗಂಗಪ್ಪ ಗೌಡ, ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಬಿ.ಕೆ. ಬಸವರಾಜ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಸಿದ್ದಣ್ಣ ಎಂ. ಸಕ್ರೀ, ಜಿಲ್ಲಾ ಕಾರ್ಯದರ್ಶಿ (ಪ್ರಭಾರ) ಶ್ರೀ ಪಿ.ಎಸ್. ಕುಂಬಾರ, ಜಿಲ್ಲಾ



ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಎ.ಎಸ್.ಓ.ಸಿ. ಶ್ರೀ ನಾಗೇಶ ಶಿವಪುರ ಮುಂತಾದವರು ಉಪಸ್ಥಿತರಿದ್ದರು.

ಅಕ್ಟೋಬರ್ 20ರಂದು ಶಿಬಿರದ ಮುಕ್ತಾಯ ಸಮಾರಂಭವನ್ನು ನಡೆಸಲಾಯಿತು. ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಡಿ.ಡಿ.ಪಿ.ಯು ಶ್ರೀ ಜೆ.ಎಸ್. ಪೂಜೇರ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ. ಸಕ್ರಿ, ಶಿಬಿರದ ನಾಯಕರುಗಳು ಮುಂತಾದವರು ಉಪಸ್ಥಿತರಿದ್ದರು.

* ಅಕ್ಟೋಬರ್ 20 ರಿಂದ 26ರ ವರೆಗೆ ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರ್ ಮೂಲ ತರಬೇತಿ ಶಿಬಿರವನ್ನು ವಾಸಂತಿಬಾಯಿ ಜಿಗಜಿಣಿ ಭಾರತ್ ಸ್ಕೌಟ್ಸ್–ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಬುರುಣಾಪೂರದಲ್ಲಿ ಏರ್ಪಡಿಸಲಾಗಿದ್ದು, ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ. ಸಕ್ರಿ ಹಾಗೂ ಪ.ಪೂ. ಉಪ ನಿರ್ದೇಶಕರಾದ ಶ್ರೀ ಜೆ.ಎಸ್. ಪೂಜೇರ್ ರವರು ಉದ್ಘಾಟಿಸಿದರು. ವೇದಿಕೆಯಲ್ಲಿ ಜಿಲ್ಲಾ ಖಜಾಂಚಿಗಳಾದ ಶ್ರೀ ಸಹಜಾನಂದ ದಂಧರಗಿ, ಜಿಲ್ಲಾ ಸಹಕಾರ್ಯದರ್ಶಿಗಳಾದ ಶ್ರೀ ಶರಣು ಸಬರದ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಪಿ.ಎಸ್. ಕುಂಬಾರ, ರೇಂಜರ್ಸ್ ವಿಭಾಗದ ಶಿಬಿರ ನಾಯಕರಾದ ಶ್ರೀ ಬಿ.ವಿ. ರಾಮಲತಾ, ರೋವರ್ಸ್ ವಿಭಾಗದ ನಾಯಕರಾದ ಶ್ರೀ ಗಣಪತಿ, ಜಿಲ್ಲಾ ನೋಡಲ್ ಅಧಿಕಾರಿಗಳಾದ ಶ್ರೀ ನಾಗರಾಜ ಕನ್ನೂರ, ಎಸ್.ಓ.ಸಿ., ಶ್ರೀ ನಾಗೇಶ ಆರ್. ಶಿವಪುರ, ಎಸ್.ಜಿ.ವಿ. ಶ್ರೀ ರಾಜಶೇಖರ ಖೇಡಗಿ, ಶ್ರೀ ಎ.ಕೆ. ಮುಲ್ಲಾ ಮುಂತಾದವರು ಉಪಸ್ಥಿತರಿದ್ದರು.




ಶಿಬಿರ ಉದ್ಘಾಟಿಸಿ ಮಾತನಾಡಿದ ಡಿಡಿಪಿಯು ಶ್ರೀ ಜೆ.ಎಸ್. ಪೂಜೇರ ರವರು ಉತ್ತಮ ಸಮಾಜ ನಿರ್ಮಾಣಕ್ಕೆ ಸ್ಕೌಟ್ಸ್-ಗೈಡ್ಸ್ ತುಂಬ ಸಹಕಾರಿಯಾಗಿದೆ. ಆದ್ದರಿಂದ ಎಲ್ಲರೂ ಕಾಲೇಜುಗಳಲ್ಲಿ ದಳ ಪ್ರಾರಂಭಿಸಿ ಮಕ್ಕಳಲ್ಲಿ ಉತ್ತಮ ಮೌಲ್ಯಗಳನ್ನು ಬಿತ್ತಿರಿ ಎಂದು ಸಲಹೆ ನೀಡಿದರು.

* ಅಕ್ಟೋಬರ್ 23ರಂದು ಜಿಲ್ಲಾ ಮಟ್ಟದ ದೇಶಭಕ್ತಿ ಗೀತಗಾಯನ ಸ್ಪರ್ಧೆಯನ್ನು ವಾಸಂತಿಬಾಯಿ ಜಿಗಜಿಣಿ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ, ಬುರಣಾಪೂರ ತಾಲ್ಲೂಕು ಜಿಲ್ಲಾ ವಿಜಯಪುರ ಇಲ್ಲಿ ಆಯೋಜಿಸಲಾಗಿತ್ತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಸಿದ್ದಣ್ಣ ಎಂ. ಸಕ್ರಿ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ವಿದ್ಯಾವತಿ ಅಂಕಲಗಿ, ಶ್ರೀಮತಿ ಕೆ. ಸುನಂದಾ ಶ್ರೀ ಶರಣು ಸಬರದ ಶ್ರೀ ಪಿ.ಎಸ್. ಕುಂಬಾರ್ ಮುಂತಾದವರು ಉಪಸ್ಥಿತರಿದ್ದರು.

* ಸರ್ದಾರ್ ವಲ್ಲಭಬಾಯ್ ಪಟೇಲ್ ರವರ ಜನ್ಮ ದಿನದ ಪ್ರಯುಕ್ತ ವಿಜಯಪುರ ಜಿಲ್ಲಾಡಳಿತ ಏರ್ಪಡಿಸಿದ "ಏಕತಾ ನಡಿಗೆ" ಯಲ್ಲಿ ನಗರದ ಕೆ.ಜಿ.ಎಸ್. ನಂ. 11, ಶಿಬಾಜಿ ವೃತ್ತ ವಿಜಯಪುರ ಶಾಲೆಯಗೈಡ್ ಮಕ್ಕಳು ಮತ್ತು ಗ್ರಾಮೀಣ ವಲಯದ ಕೆ.ಜಿ.ಎಸ್. ತೊರವಿ ಶಾಲೆಯ ಗೈಡ್ ಮಕ್ಕಳು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಕೆ.ಜಿ.ಎಸ್. ನಂ. 11 ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಎ.ಕೆ. ದಳವಾಯಿ ಮತ್ತು ಕೆ.ಜಿ.ಎಸ್. ತೊರವಿ ಶಾಲೆಯ ಗೈಡ್ ಕ್ಯಾಪ್ಟನ್ ಕು. ಅಶ್ವಿನಿ ಚೋರಗಿ ಎಸ್.ಜಿ.ವಿ. ರಾಜಶೇಖರ ಖೇಡಗಿ, ಉಪಸ್ಥಿತರಿದ್ದರು.




## ಸ್ಕೌಟ್ಸ್ ಮತ್ತು ಗೈಡ್ಸ್ ರಸಪ್ರಶ್ನೆ - 09

ಎಂ.ಎಸ್ ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

01. YAPನ್ನು ವಿಸ್ತರಿಸಿ.
02. ಪ್ರಾಯಕ್ಕೆ ಬಂದ ಜೂಲೂ ಯುವಕನನ್ನು ಒಂದು ಗುರಾಣಿ ಮತ್ತು ಈಟಿ ತರಹದ ರಕ್ಷಣಾ ಆಯುಧವನ್ನು ಕೊಟ್ಟು ಕಾಡಿಗೆ ಕಳುಹಿಸುತ್ತಿದ್ದರು, ಆ ಭರ್ಜಿಯ ಮಾದರಿಯ ಆಯುಧಕ್ಕೆ ಏನೆಂದು ಕರೆಯುತ್ತಾರೆ.
03. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಯಾವ ವರ್ಷ ವಿಶ್ವಸಂಸ್ಥೆಯ (U.N) "ಮೆಸ್ಸೆಂಜರ್ ಆಫ್ ಪೀಸ್" ಪ್ರಶಸ್ತಿ ನೀಡಿ ಗೌರವಿಸಲಾಯಿತು?
04. ಒಂದು ಟ್ರೆಸಲ್‌ನ ಮೇಲ್ಭಾಗದಲ್ಲಿರುವ ಅಡ್ಡ ಗಳುವಿಗೆ ಏನೆನ್ನುತ್ತಾರೆ?
05. ಮುಳುಗುತ್ತಿರುವ ಒಬ್ಬ ವ್ಯಕ್ತಿಯನ್ನು ರಕ್ಷಿಸಲು ಪ್ರಯತ್ನಿಸುವಾಗ ತೆಗೆದುಕೊಳ್ಳಬೇಕಾದ ಬಹುಮುಖ್ಯ ಜಾಗರೂಕತೆ ಯಾವುದು?
06. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಧ್ವಜಗೀತೆಯನ್ನು ಬರೆದವರು ಯಾರು?
07. ಧೂಮಪಾನದಿಂದ ಒಬ್ಬ ಸ್ಕೌಟ್‌ಗೆ ಬಹಳ ಪ್ರಮುಖವಾಗಿ ಬೇಕಾದ ಯಾವ ಗ್ರಹಣ ಶಕ್ತಿಯು ಕುಂದುತ್ತದೆ?
08. 10ನೇ ರಾಷ್ಟ್ರೀಯ ಸ್ಕೌಟ್ ಮತ್ತು ಗೈಡ್ ಜಾಂಬೂರಿ ಎಲ್ಲಿ ಮತ್ತು ಯಾವಾಗ ನಡೆಯಿತು.
09. ಮರದ ಅಲಂಕಾರ ಮಾಡುವ ಬುಲ್‌ಬುಲ್ ಮರವು ಸುಮಾರು ಎಷ್ಟು ಎತ್ತರ ಇರಬೇಕು?
10. ಟೋಪೊಗ್ರಾಫಿಕಲ್ ಮ್ಯಾಪ್‌ನಲ್ಲಿ ಒಂದು ಗುಳಿ (ಜ್ವಾಲಾಮುಖಿಯ ಗುಂಡಿ) ಯನ್ನು ಸೂಚಿಸುವ ಕಾಂಟೂರ್ ರೇಖೆಗಳ ಸಮತಟ್ಟನ್ನು ತೋರಿಸುವ ಸಮಾನ ರೇಖೆಗಳಿಗೆ ಏನನ್ನುತ್ತಾರೆ?

### ಸ್ಕೌಟ್ಸ್ ಗೈಡ್ಸ್ ರಸಪ್ರಶ್ನೆ - 08 ಉತ್ತರ

01. i) ಒಳ್ಳೆಯ ಗಾಳಿ ಮತ್ತು ಸೂರ್ಯರಶ್ಮಿ ii) ವ್ಯಾಯಾಮ iii) ಶುಚಿತ್ವ iv) ಶುಭ್ರ ಉಡುಪು v) ಉತ್ತಮ ಆಹಾರ vi) ವಿಶ್ರಾಂತಿ/ನಿದ್ದೆ
02. ಯಾವುದೇ ಒತ್ತಡಕ್ಕೆ ಬಿಚ್ಚಿಕೊಳ್ಳದಿರುವುದು ಮತ್ತು ಸುಲಭವಾಗಿ ಬಿಚ್ಚಲು ಬರುವುದು
03. ಜಾಂಬೋರಿ ಆನ್ ದಿ ಏರ್
04. ಕೆಂಡವನ್ನು ಬೂದಿಯಲ್ಲಿ ಮುಚ್ಚುವುದು
05. ಫ್ರೋಂಕ್ ಕರಿ ಆಸ್ - ನಾರ್ವೆ
06. 1881
07. ಲ್ಯಾಟಿನ್
08. ಕಡಿಮೆ ಮಾಡು (Reduce) (Recycle) ಮರು ಬಳಸು (Reuse)
09. ಓವರ್ ಟೇಕ್ ಮಾಡಬಾರದು
10. ಪ್ರಾಣ ಮಿತ್ರ

# ಗಾಂಧಿ ಎಂದರೆ

ಬೆಂ. ಶ್ರೀ ರವೀಂದ್ರ
ಸಂಚಾಲಕರು, ಸ್ಕೌಟ್-ಗೈಡ್ ಮಾಸಪತ್ರಿಕೆ

ಗಾಂಧಿ ಎಂದರೆ ಇವನೇನಮ್ಮ
ಶಾಂತಿ ಸತ್ಯದ ಸಾಧಕನಮ್ಮ ॥ಪ॥

ಸೂಟುಬೂಟು ಹಾಕಿಲ್ಲಮ್ಮ
ಜುಬ್ಬಾ ಶೇರ್ವಾನಿ ತೊಟ್ಟಿಲ್ಲಮ್ಮ
ಟೊಪ್ಪಿಗೆ ಗುಲಾಬಿ ಇಲ್ವಲ್ಲಮ್ಮ
ತರತರ ದಿರುಸು ಗುರುತಿಲ್ಲಮ್ಮ ॥೧॥

ಭಾಷಣ ಭೂಷಣ ಇವನಲ್ಲಮ್ಮ
ಮಾಯಾ ಮೋಡಿ ಮಾತಿಲ್ಲಮ್ಮ
ಅಬ್ಬರುಬ್ಬರವಿಲ್ಲದ ಮಂಜುಳವಮ್ಮ
ಸಾದಾಸೀದಾ ತಣ್ಣನೆ ರವವಮ್ಮ ॥೨॥

ಗಾಂಧೀತಾತನು ಭಗೀರಥನಮ್ಮ
ಬೊಚ್ಚುಬಾಯಲಿ ನಗುವುದೇಕಮ್ಮ
ಮೊಳಕಾಲ್ಪಂಚೆ ಕೊಕ್ಕರೆ ಕಾಲು
ಬರಿಮೈ ದಟ್ಟಿ ಕೈಯಲಿ ಕೋಲಮ್ಮ ॥೩॥

ರಾಮನ ಭಕ್ತಿ ಹರಿಶ್ಚಂದ್ರನ ಶಕ್ತಿ
ಎಲ್ಲರಿಗೆ ಸನ್ಮತಿ ಬೇಡಿದನಮ್ಮ
ಒರಟು ಎಕ್ಕಡ ಬೀಸುಗಾಲ್ನಡೆಯ
ನಾಡಿನ ಜನಮನ ಪ್ರತಿನಿಧಿಯಮ್ಮ ॥೪॥

ಬಿದ್ದವರ ಹಕ್ಕು ಕೊಡಿರೆಂದನಮ್ಮ
ರೈಲು ಡಬ್ಬಿಯಿಂದ ಹೊರದಬ್ಬಿದರಮ್ಮ
ಸತ್ಯಾಗ್ರಹ ಅಸ್ತ್ರ, ಹುಡುಕಿದನಮ್ಮ
ಉಪವಾಸಕೆ ಬ್ರಿಟಿಷರು ಬಾಗಿದರಮ್ಮ ॥೫॥

ಪಾಯಖಾನೆಯ ಬಳಿದವನಮ್ಮ
ಮುಟ್ಟದವರನು ತಬ್ಬಿದವನಮ್ಮ
ಸ್ವಚ್ಛತೆ ದೇವರು ಅಂದವನಮ್ಮ
ಈಶ್ವರ ಅಲ್ಲಾ ಒಂದೆನ್ನುವನಮ್ಮ ॥೬॥

ಅಹಿಂಸೆಗೆ ಗೆಲವು ತೋರಿದನಮ್ಮ
ಜೈಲಿಗೆ ಅಂಜದ ಆಶ್ರಮವಾಸಿ
ಕೃಷ್ಣಗೀತೆಯೇ ಅವನಾಗಿಹನಮ್ಮ
ನಡೆನುಡಿ ಒಂದಾದ ಅದ್ಭುತವಮ್ಮ ॥೭॥

ಬ್ರಿಟಿಷರ ಭಾನಗಡಿ ಬಿಡಿಸಿದನಮ್ಮ
ಸ್ವತಂತ್ರ ಭಾರತ ನಮ್ಮದೆಂದನಮ್ಮ
ಹೇಡಿಯ ಗುಂಡಿಗೆ ಗುಂಡಿಗೆಯಿತ್ತು
'ಹೇ ರಾಮ್' ಹಾಡಿದ ವೀರನಮ್ಮ ॥೮॥

ಗಾಂಧಿ ನಾಟಕ ನಡೆದಿದೆಯಮ್ಮ
ಓಟಿಗೆ ಒಗಟನು ನುಡಿದಿಹರಮ್ಮ
ಮಣ್ಣಿನ ಕಣದಲಿ ಕಣ್ಣಿನ ಮನದಲಿ
ಇಹ ತಾತ, ಕುರ್ಚಿಕಣಕೆ ಕಾಣನಮ್ಮ ॥೯॥

ಚಿರಂಜೀವನಿವ ಅನಂತದ ಶಿಶುವು
ಅಮೃತಮಂಥನದಿ ವಿಷಕುಡಿದವನು
ದಾರಿಯೇ ತಾನಾದ ಹಗಲಿನ ಬಂಡಿ
ಗಾಂಧಿಯೆಂದೆ ನೀನು ನಾನಮ್ಮ ॥೧೦॥



ಭಾರತದ ಪ್ರತಿಯೊಂದು ಮನೆಯಲ್ಲೂ
ಸ್ಕೌಟ್ ಮತ್ತು ಗೈಡ್‌ಗಳಂತಹ
ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

– ಮಹಾತ್ಮ ಗಾಂಧಿ



# ವಾಂತಿ

ಡಾ|| ವಸುಂಧರಾ ಭೂಪತಿ
ಮಾಜಿ ಅಧ್ಯಕ್ಷರು
ಕರ್ನಾಟಕ ಪುಸ್ತಕ ಪ್ರಾಧಿಕಾರ

ಬಸ್ಸಿನಲ್ಲಿ ಹೋಗೋದಂದ್ರೆ ನನಗಾಗಲ್ಲ, ವಾಂತಿಯಾಗುತ್ತದೆ" ಎಂದು ಕೆಲವರು ಹೇಳೋದನ್ನು ನಾವೆಲ್ಲ ಕೇಳಿದ್ದೇವೆ. ಸಿನಿಮಾ ಮತ್ತು ಕಿರುತೆರೆ ಧಾರವಾಹಿಗಳಲ್ಲಿಯಂತೂ ಮಹಿಳೆ ಗರ್ಭ ಧರಿಸುವುದನ್ನು ತಿಳಿಸಲು ಬಹುತೇಕ ನಿರ್ದೇಶಕರು ವಾಂತಿಯಮೊರೆ ಹೋಗುವುದು ಅತ್ಯಂತ ಸಾಮಾನ್ಯ ಅನೇಕ ಕಾರಣಗಳಿಗಾಗಿ ವಾಂತಿ ಕಾಣಿಸಿಕೊಳ್ಳುತ್ತದೆ.

ವಾಂತಿಯಾಗುವ ಮುಂಚೆ ಹುಳಿತೇಗು ಬರುವುದು, ವಾಕರಿಕೆ, ಹೊಟ್ಟೆಯುಬ್ಬರ, ತಲೆಸುತ್ತು, ಎದೆ ಉರಿ, ಬಾಯಿಯಲ್ಲಿ ನೀರು ಬರುವುದು ಮುಂತಾದ ಲಕ್ಷಣಗಳು ಕಂಡುಬರುತ್ತವೆ.

* ಅಜೀರ್ಣದಿಂದ
* ದೇಹದಲ್ಲಿ ಪಿತ್ತದೋಷ ವೃದ್ಧಿಯಾಗುವುದರಿಂದ
* ಅಧಿಕ ಪ್ರಮಾಣದ ಆಹಾರ ಸೇವನೆಯಿಂದ
* ಗರ್ಭಧರಿಸಿದ ಆರಂಭದ ತಿಂಗಳುಗಳಲ್ಲಿ
* ದೇಹಕ್ಕೆ ಒಗ್ಗದ ಆಹಾರ ಸೇವನೆ ಮಾಡುವುದರಿಂದ
* ಊಟ ಮಾಡುವಾಗ ಸುತ್ತಲಿನ ವಾತಾವರಣ ಅಸಹ್ಯಕರವಾಗಿದ್ದರೆ
* ವಾಹನದಲ್ಲಿ ಪ್ರಯಾಣಿಸುವಾಗ, ಕೆಲವರಿಗೆ ಪೆಟ್ರೋಲ್, ಡೀಸೆಲ್ ವಾಸನೆಯಿಂದ

**ದ್ರವಾಹಾರ ಸೇವನೆ:** ಆಗಾಗ ನೀರು ಕುಡಿಯುತ್ತಿರುಬೇಕು. ಹಣ್ಣಿನ ರಸ, ಹಾಲು, ಸೂಪ್ ಮುಂತಾದವುಗಳನ್ನು ಕುಡಿಯಬೇಕು. ಕಾಯಿಸಿ ಆರಿಸಿದ ನೀರಿಗೆ ಸಕ್ಕರೆ, ಉಪ್ಪು ಬೆರೆಸಿ ಕುಡಿಯಬೇಕು. ಯಾವುದೇ ದ್ರವ ಕುಡಿಯುವಾಗ ನಿಧಾನವಾಗಿ ಗುಟುಕರಿಸಬೇಕು. ಒಂದೇ ಬಾರಿ ಗಟಗಟನೆ ಕುಡಿಯಬಾರದು. ದ್ರವಾಹಾರ ಆಯ್ಕೆ ಮಾಡುವಾಗ ಕೃತಕ ತಂಪು ಪಾನೀಯಗಳ ಸೇವನೆ ಬೇಡ. ಬಿಸಿಯಾದ ಪಾನೀಯಗಳೇ ಒಳ್ಳೆಯದು. ಹಣ್ಣಿನ ರಸಕ್ಕೆ ಫ್ರಿಜ್ ನೀರು ಬೆರೆಸಬಾರದು. ಸಿಹಿಮಜ್ಜಿಗೆ, ಎಳನೀರು, ಕಬ್ಬಿನಹಾಲು, ಬೆಲ್ಲದ ಪಾನಕ ಸೇವೆ ಕೂಡ ಒಳ್ಳೆಯದು.

**ಪ್ರಯಾಣದ ವಾಂತಿ:** ವಾಹನಗಳಲ್ಲಿ ಪ್ರಯಾಣಿಸುವಾಗ ಎರಡು-ಮೂರು ಗಂಟೆಗಳ ಮುಂಚೆಯೇ ಆಹಾರ ಸೇವಿಸಿರಬೇಕು. ಪ್ರಯಾಣದ ಸಮಯದಲ್ಲಿ ತಿನ್ನುವುದಾಗಲೀ, ಕುಡಿಯುವುದಾಗಲೀ ಬೇಡ. ನಿಂಬೆಹಣ್ಣು, ಕಿತ್ತಲೆ ಮೋಸಂಬಿಗಳಲ್ಲಿ ಯಾವುದಾದರೊಂದು ಹಣ್ಣನ್ನು ಕೈಯಲ್ಲಿರಿಸಿಕೊಂಡಿದ್ದು ಪ್ರಯಾಣದ ಸಮಯದಲ್ಲಿ ಆಗಾಗ ಮೂಸುತ್ತಿರಬೇಕು ಅಲ್ಲದೇ ಪ್ರಯಾಣಿಸುವಾಗ ಕಣ್ಮುಚ್ಚಿ ಕೂರಬೇಕು. ಮನದಲ್ಲಿ ವಾಂತಿಯ ಬಗೆಗೆ ಯೋಚನೆ ಸಲ್ಲದು.

**ಮನೆಮದ್ದು:** ಒಂದು ಚಮಚೆ ನಿಂಬೆರಸಕ್ಕೆ ಅರ್ಧ ಚಮಚೆ ಜೇನುತುಪ್ಪ ಮತ್ತು ಏಲಕ್ಕಿ ಪುಡಿ ಸೇರಿಸಿ ವಾಂತಿ ನಿಲ್ಲುವವರೆಗೂ ಹತ್ತು-ಹದಿನೈದು ನಿಮಿಷಗಳಿಗೊಮ್ಮೆ ಕುಡಿಯುತ್ತಿರಬೇಕು.

* ಒಂದು ಚಮಚೆ ಹಸಿಶುಂಠಿ ರಸಕ್ಕೆ ಒಂದು ಚಮಚೆ ಜೇನುತುಪ್ಪ ಬೆರೆಸಿ 1 ರಿಂದ 2 ಚಮಚೆ ರಸವನ್ನು ಬೆಳಿಗ್ಗೆ ಖಾಲಿಹೊಟ್ಟೆಯಲ್ಲಿ ಸೇವಿಸಬೇಕು.
* ಸಿಪ್ಪೆ ಸಹಿತ ಇಡೀ ಏಲಕ್ಕಿಯನ್ನು ಕೆಂಡದ ಮೇಲೆ ಹಾಕಿ ಅರಳಿದ ನಂತರ ಪುಡಿಮಾಡಿ ಜೇನುತುಪ್ಪ ಬೆರೆಸಿ ಗಂಟೆಗೊಮ್ಮೆ ಸೇವಿಸಬೇಕು.
* ಪುದೀನಾ ಸೊಪ್ಪಿನ ರಸವನ್ನು ಒಂದು ಚಮಚೆ ಜೇನುತುಪ್ಪದೊಂದಿಗೆ ಬೆರೆಸಿ ದಿನಕ್ಕೆ ಮೂರರಿಂದ ನಾಲ್ಕು ಬಾರಿ 2 ರಿಂದ 4 ಚಮಚೆ ಸೇವಿಸಬೇಕು.

# ಮನೆಯಲ್ಲೊಂದು ಲೈಬ್ರರಿ ಇರಲಿ

ಎಂ.ಎಸ್. ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

"ಎಷ್ಟೇ ಸುಂದರವಾದ ಮನೆಯಾದರೂ ಒಂದು ಪುಸ್ತಕ ಸಂಗ್ರಹವಿಲ್ಲದಿದ್ದರೆ ಆ ಮನೆ ಅಪೂರ್ಣವೆನಿಸುತ್ತದೆ" ಎನ್ನುತ್ತಾನೆ ಚಿಂತಕ ಮ್ಯಾಕ್ಸಿಂ ಗಾರ್ಕಿ".

ಅಡಿಗೆ ಮನೆ ಸೌಕರ್ಯಗಳು, ಮನೆಯ ಒಳಸೊಬಗು, ಓಡಾಡುವ ವಾಹನ, ಪೀಠೋಪಕರಣಗಳು, ಮನರಂಜನಾ ಉಪಕರಣಗಳು ಇವೆಲ್ಲವುಗಳ ಜೊತೆಗೆ ಒಂದು ಕಪಾಟಿನ ತುಂಬಾ ಪುಸ್ತಕ ಸಂಗ್ರಹವಿದ್ದರೆ ಆ ಮನೆಯ ಶೋಭೆ ಖಂಡಿತ ಹೆಚ್ಚುತ್ತದೆ. ಆ ಕಪಾಟಿನಲ್ಲಿ ಯಾವ ರೀತಿಯ ಪುಸ್ತಕಗಳಿವೆ ಎನ್ನುವುದು ಆ ಮನೆಯ ಸಂಸ್ಕಾರದ ಪ್ರತೀಕವಾಗಿರುತ್ತದೆ.

ಪುಸ್ತಕಗಳ ಒಡನಾಟದಲ್ಲಿ ಬೆಳೆದ ಮಕ್ಕಳು ಇತರೆ ಹವ್ಯಾಸಗಳಿಗೆ ಬಲಿಯಾಗುವ ಸಾಧ್ಯತೆಗಳು ಕಡಿಮೆ. ವ್ಯಕ್ತಿತ್ವ ಬೆಳವಣಿಗೆಗೆ ಯಾವುದೇ ರೀತಿಯಲ್ಲಿ ಸಹಾಯವಾಗದ ಅಭ್ಯಾಸಗಳಿಗೆ ಮಕ್ಕಳು ಬಹಳ ಬೇಗ ಆಕರ್ಷಿತರಾಗುತ್ತಾರೆ. ವೀಡಿಯೋ ಆಟಗಳು ಮಕ್ಕಳನ್ನು ಬೇಗ ಸೆಳೆಯುವ ಕಾರಣ, ಮನರಂಜನೆಯ ಜೊತೆಗೆ ಮೆದುಳಿಗೆ ಯಾವುದೇ ರೀತಿಯ ಸವಾಲು ಎನ್ನಿಸದಿರುವುದು. ಇದರಿಂದ ಕಲಿಕೆಯೇನು? ಮತ್ತು ಭವಿಷ್ಯದ ಜೀವನದಲ್ಲಿ ಉಪಯೋಗವೇನು? ಎಂದರೆ ಅದು ಶೂನ್ಯವೆ.

ಎಳೆವಯಸ್ಸಿನಿಂದ ವರ್ಣರಂಜಿತ ಚಿತ್ರಗಳಿರುವ ಪುಸ್ತಕಗಳನ್ನು ತೋರಿಸಿ ಕಥೆ ಹೇಳುವುದರ ಮೂಲಕ ಓದುವುದರಲ್ಲಿ ಆಸಕ್ತಿ ಮತ್ತು ಕುತೂಹಲ ಮೂಡಿಸುವುದರ ಜೊತೆಗೆ ಹೊರ ಜಗತ್ತಿನ ಪರಿಚಯ ಮಾಡಿಕೊಡಬಹುದು. ಮಕ್ಕಳು ಮಲಗಲು ಹೋದಾಗ ಅವರಿಗೆ ಕಥೆಯನ್ನು ಓದಿಹೇಳುವ ಅಭ್ಯಾಸ ಪಾಶ್ಚಿಮಾತ್ಯ ದೇಶಗಳಲ್ಲಿ ಸರ್ವೇಸಾಮಾನ್ಯ. ಚಂದಮಾಮ, ಟ್ವಿಂಕಲ್ ಮತ್ತಿತರ ಕಾಮಿಕ್ ಪುಸ್ತಕಗಳು ಮಕ್ಕಳಿಗೆ ಸಿಗುವಂತಿದ್ದರೆ ಒಳ್ಳೆಯದು.

ನಮ್ಮ ಆದಾಯದಲ್ಲಿ ಶೇಕಡ 3 ರಿಂದ 5 ರಷ್ಟು ಪ್ರತಿ ತಿಂಗಳು ಪುಸ್ತಕ ಕೊಳ್ಳುವುದಕ್ಕೆ ಮೀಸಲಿಟ್ಟರೆ ಕ್ರಮೇಣವಾಗಿ ಒಂದು ಒಳ್ಳೆಯ ಗ್ರಂಥಾಲಯವೇ ನಿರ್ಮಾಣವಾಗುತ್ತದೆ. ಕೂಡಲೇ ಓದಲಾಗದಿದ್ದರೂ ಎಂದಾದರೊಂದು ದಿನ ಓದಿಸಿಕೊಳ್ಳುತ್ತವೆ. ಸಾಕಷ್ಟು ಓದಿಕೊಂಡಿದ್ದವರನ್ನು ಸಮಾಜ ನೋಡುವ ದೃಷ್ಟಿಯೇ ಬೇರೆ. ತುಂಬಾ ಓದಿಕೊಂಡವರು ಯಾರೊಡನೆಯಾದರೂ ಹೊಂದಿಕೊಂಡು ಸಕ್ರಿಯವಾಗಿ ಸಂಭಾಷಣೆಯಲ್ಲಿ ಭಾಗವಹಿಸುವ ಶಕ್ತಿ ಹೊಂದಿರುತ್ತಾರೆ ಎನ್ನುವುದು ನನ್ನ ಅಭಿಪ್ರಾಯ.

ಸಾಧಾರಣವಾಗಿ ನಮಗೆ ಆಸಕ್ತಿಯಿರುವ ವಿಷಯ, ಸಾಹಿತಿ ಇವುಗಳ ಬಗ್ಗೆ ಪುಸ್ತಕಗಳು ತಾನೆ ತಾನಾಗಿ ಸಂಗ್ರಹವಾಗುವುದು ಸ್ವಾಭಾವಿಕ. ಬೇರೆ ಬೇರೆ ವಿಷಯಗಳ ಕೃತಿಗಳ ಸಂಗ್ರಹವೂ ಮತ್ತು ಓದು ನಮ್ಮ ಚಿಂತನೆಗಳನ್ನು ವಿಶಾಲವಾಗಿಸುತ್ತವೆ. ಓದುವುದರಲ್ಲಿ ಮಡಿವಂತಿಕೆ ಅಷ್ಟು ಒಳ್ಳೆಯದಲ್ಲವೆಂಬುವುದು ನನ್ನ ಅಭಿಪ್ರಾಯ. ನಮ್ಮ ವೈಯಕ್ತಿಕ ಉನ್ನತಿಗಾಗಿ ನಾವು ಮಾಡುವ ಕೆಲಸ ಓದುವುದು ಒಂದೇ ಅಲ್ಲವೇ? ಓದುವ ಹವ್ಯಾಸವಿರುವವನಿಗೆ ಯಾವತ್ತೂ ಬೇಸರವಾಗುವುದಿಲ್ಲ, ಒಂಟಿತನ ಕಾಡುವುದಿಲ್ಲ ಮತ್ತು ಎಲ್ಲಿ ಬೇಕಾದರೂ ಬದುಕಬಲ್ಲ.

ಹಿರಿಯರಿಗೆ ಕನಿಷ್ಟ ಒಂದು ಗಂಟೆಯಾದರೂ ಓದುವ ಅಭ್ಯಾಸವಿದ್ದರೆ ಅದು ಕಿರಿಯರಿಗೂ ಹರಡುತ್ತದೆ. ಮೊದಲನೆಯದಾಗಿ ಮನೆಗೆ ವೃತ್ತ ಪತ್ರಿಕೆ ಮತ್ತು ನಿಯತಕಾಲಿಕಗಳು ಬರುತ್ತಿದ್ದರೆ ಹಾಗೂ ಅದರಲ್ಲಿ ತಮಗಿಷ್ಟವಾದ ವಿಷಯ ಮತ್ತು ಲೇಖನಗಳ ಬಗ್ಗೆ ಕಿರಿಯರೊಂದಿಗೆ ಮಾತನಾಡುತ್ತಿದ್ದರೆ ಅವರಿಗೂ ಓದುವುದರಲ್ಲಿ ಆಸಕ್ತಿ ಬರಬಹುದು. ಪಠ್ಯಪುಸ್ತಕಗಳನ್ನು ಮಾತ್ರ ಓದುವುದರಿಂದ ನಿಜವಾದ ಜ್ಞಾನಾರ್ಜನೆ ಸಾಧ್ಯವಿಲ್ಲವೆನ್ನುವುದು ಎಳೆಯರಿಗೆ ಅರ್ಥಮಾಡಿಸಿ, ಭಿನ್ನ

ಭಿನ್ನವಾದ ವಿಷಯಗಳ ಪುಸ್ತಕಗಳನ್ನು ಓದಲು ಪ್ರೋತ್ಸಾಹಿಸಬೇಕು. ಪ್ರಾರಂಭದಲ್ಲಿ ಮಕ್ಕಳು ಓದಬಹುದಾದ ಸಾಹಿತ್ಯವನ್ನು ಹಿರಿಯರು ಆರಿಸುವುದು ಉತ್ತಮ. ಒಮ್ಮೆ ಅವರಿಗೆ ಓದುವ ಹುಚ್ಚು ಹಿಡಿದರೆ ಅದು ಖಂಡಿತಾ ನಿರಂತರ. ಅಂತಹವರು ಯಾವತ್ತೂ ಸರಿಯಾದ ದಾರಿಯಲ್ಲೇ ಹೋಗುತ್ತಾರೆಂದು ಭರವಸೆಯಿಡಬಹುದು.

ಪ್ರತಿಯೊಂದು ಮನೆಯಲ್ಲಿ ಇರಲೇ ಬೇಕಾದ ಪುಸ್ತಕಗಳೆಂದರೆ..... ಒಂದು ನಿಘಂಟು, ಒಂದು ಅಟ್ಲಾಸ್, ರಾಮಾಯಣ–ಮಹಾಭಾರತ, ಪಕ್ಷಿ, ಪ್ರಾಣಿ, ಮರಗಳನ್ನು ಪರಿಚಯಿಸುವ ಸರಳ ಪುಸ್ತಕಗಳು, ಇತರೆ. ಮಹಾತ್ಮರ ಜೀವನ ಚರಿತ್ರೆಗಳು, ಭೈರಪ್ಪ ತೇಜಸ್ವಿ, ಕಾರಂತರ ಒಂದೆರೆಡು ಕೃತಿಗಳು, ಹೀಗೆ ನಮ್ಮ ಅಭಿರುಚಿಗೆ ತಕ್ಕಂತೆ ಒಂದು ಸಂಗ್ರಹವಿರಬೇಕು.

ಶಾಲೆಯ ಗ್ರಂಥಾಲಯದಲ್ಲಿರುವ ಪುಸ್ತಕಗಳನ್ನು ಮೊದಲು ಶಿಕ್ಷಕರು ಓದಿ, ಅವುಗಳ ಕಥೆ ಹೇಳುವುದರ ಮೂಲಕ ಮಕ್ಕಳಲ್ಲಿ ಪುಸ್ತಕ ಓದುವ ಹವ್ಯಾಸ ಬೆಳೆಸಬಹುದು.

ಹುಟ್ಟು ಹಬ್ಬ, ಮತ್ತಿತರ ಶುಭ ಸಮಾರಂಭಗಳಲ್ಲಿ ಪುಸ್ತಕಗಳನ್ನು ಉಡುಗೊರೆಯಾಗಿ ನೀಡುವುದು ಒಂದು ಒಳ್ಳೆಯ ವಾಡಿಕೆ. ಮಕ್ಕಳು ತಮ್ಮ ಪಾಕೆಟ್ ಮನಿಯಲ್ಲಿ ಪುಸ್ತಕಕೊಂಡರೆ ಅವರಿಗೆ ಸರಿಯಾದ ಸಂಸ್ಕಾರ ನೀಡುವಲ್ಲಿ ನಾವು ಯಶಸ್ವಿಯಾದೆವೆಂದುಕೊಳ್ಳಬೇಕು.



**ಏನೂ ಅಲ್ಲದ ನನ್ನನ್ನು ರೂಪಿಸಿದ್ದು ಪುಸ್ತಕಗಳು**

ಜಗತ್ತಿನ ನಾಲ್ಕನೇ ಅತ್ಯಂತ ಶ್ರೀಮಂತ ವಾರನ್ ಬಫೆ ತನ್ನ ಜೀವ ಚರಿತ್ರೆಯಲ್ಲಿ ಬರೆಯುತ್ತಾನೆ. "ಷೂ ಸೇಲ್ಸ್‌ಮಾನ್ ಆಗಿದ್ದ ನನ್ನ ಜೀವನವನ್ನು ಬದಲಿಸಿದ್ದು ಒಂದು ಪುಸ್ತಕ". "ಆಕಸ್ಮಿಕವಾಗಿ ನನಗೆ ಬೆಂಜಮಿನ್ ಗ್ರಾಹಾಂನ 'ಇಂಟಲಿಜೆಂಟ್ ಇನ್‌ವೆಸ್ಟರ್' ಪುಸ್ತಕ ಸಿಕ್ಕಿತು. ಆ ಪುಸ್ತಕ ನನ್ನ ಜೀವನದ ದಿಕ್ಕನ್ನೆ ಬದಲಿಸಿತು" ಎಂದು.

ಮುಖ್ಯವಾಗಿ ಜ್ಞಾನಕ್ಕಿಂತ ಅಮೂಲ್ಯವಾದುದು ಮತ್ತೊಂದಿಲ್ಲ ಎನ್ನುವ ಯುವ ಪೀಳಿಗೆ ಒಂದು ದೇಶದ ಆಸ್ತಿಯೇ ಸರಿ.

# ಅಭಿನಂದನೆಗಳು



ಶ್ರೀ ಎಂ. ಎನ್. ಗವನ್ನವರ ಸ್ಕೌಟ್ ಮಾಸ್ಟರ್ ಹೆಚ್.ಪಿ, ಎಸ್. ಚಿಕ್ಕೋಪ್ಪ ಎಸ್.ಕೆ. ಬೆಳಗಾವಿ ಜಿಲ್ಲೆ ರಾಮದುರ್ಗ ಸ್ಥಳೀಯ ಸಂಸ್ಥೆ ಇವರು ಸ್ಕೌಟ್ಸ್–ಗೈಡ್ಸ್ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗೆ ಜಿಲ್ಲಾ ಸಂಸ್ಥೆ ಬೆಳಗಾವಿ ಇವರು ಸೆಪ್ಟೆಂಬರ್ 5 "ಶಿಕ್ಷಕರ ದಿನಾಚರಣೆ"ಯಂದು ಭಾರತ ಸ್ಕೌಟ್–ಗೈಡ್ ಜಿಲ್ಲೆಯ, "ಸೇವಾರತ್ನ ಪ್ರಶಸ್ತಿ" ನೀಡಿ ಗೌರವಿಸಲಾಗಿದೆ.

ಇವರು ರಾಮದುರ್ಗ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.



ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿಯ ವಿಶೇಷ ಘಟಕ ಯೋಜನೆ ಹಾಗು ಗಿರಿಜನ ಉಪಯೋಜನೆ ಅಡಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಯುವಜನರಿಗೆ "ಬೇಸಿಕ್ ಪರ್ವತಾರೋಹಣ" ತರಬೇತಿಯನ್ನು 'ದಿರಂಗ್' ಅರುಣಾಚಲ ಪ್ರದೇಶ್ ಇಲ್ಲಿ ಆಯೋಜಿಸಲಾಗಿದೆ. ಈ ತರಬೇತಿಗೆ ಭಾರತ್ ಸ್ಕೌಟ್ಸ್–ಗೈಡ್ಸ್ ಯಳಂದೂರು ಸ್ಥಳೀಯ ಸಂಸ್ಥೆಯ ಜೈಹಿಂದ್ ಓಪನ್ ರೋವರ್ ಕ್ರ್ಯೂನ ರೋವರ್ ಸ್ಕೌಟ್ ಲೀಡರ್ ಶ್ರೀ ಪ್ರದೀಪ್ ಎಸ್. ರವರು ಚಾಮರಾಜನಗರ ಜಿಲ್ಲೆಯಿಂದ ಆಯ್ಕೆಗೊಂಡಿದ್ದು ಇವರು ಅಕ್ಟೋಬರ್ ತಿಂಗಳಂದು ತರಬೇತಿಯಲ್ಲಿ ಭಾಗವಹಿಸಿರುತ್ತಾರೆ.

ಇವರುಗಳಿಗೆ ರಾಜ್ಯ ಸಂಸ್ಥೆಯು ಅಭಿನಂದಿಸುತ್ತದೆ.

– ರಾಜ್ಯ ಕಾರ್ಯದರ್ಶಿ

# ಭಾರತೀಯ ಸಂಖ್ಯಾ ಪದ್ಧತಿ





**ಜಿ.ಎನ್. ನರಸಿಂಹಮೂರ್ತಿ**
ಕಾರ್ಯದರ್ಶಿ, ಕನ್ನಡ ಗಣಕಪರಿಷತ್





ನಾವೆಲ್ಲ ಪ್ರಪಂಚಾದ್ಯಂತ ಇಂದು ದಶಮಾನ ಪದ್ದತಿಯನ್ನು ಅನುಸರಿಸುತ್ತಿದ್ದೇವೆ. ಅಂಕೆಗಳು , ದಶಮಾನ ಸಂಖ್ಯಾ ಪದ್ಧತಿ ಎರಡೂ ಜಾಗತಿಕ ಗಣಿತಕ್ಕೆ ಭಾರತದ ನೀಡಿರುವ ದೊಡ್ಡ ಕೊಡುಗೆ. ಅನೇಕ ಪಾಶ್ಚಾತ್ಯ ಗಣಿತಜ್ಞರು ಇದನ್ನು ಮುಕ್ತ ಕಂಠದಿಂದ ಕೊಡಾಡಿದ್ದಾರೆ. ನಾವು ಇಂದು ಬಳಸುವ ಹತ್ತು ಅಂಕೆಗಳು 0,1,2,3,4,5,6,7,8,9 ಮತ್ತು ಸೊನ್ನೆ ಇವು ಗಣಿತವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಮತ್ತು ಗಣಿತ ಇಂದಿನ ಮಟ್ಟಕ್ಕೆ ಬೆಳೆಯಲು ಮೂಲಭೂತ ಸಾಧನಗಳಾಗಿವೆ.

ನಮಗೆಲ್ಲ ತೀಳಿದಿರುವ ಹಾಗೆ ದಶಮಾನ ಪದ್ದತಿಯಲ್ಲಿ ಒಂದು ಸಂಖ್ಯೆಯನ್ನು ನಿರೂಪಿಸುವಾಗ ಅವುಗಳ ಸ್ಥಾನಮೌಲ್ಯಗಳು ಮುಖ್ಯವಾಗುತ್ತವೆ. ಉದಾಹರಣೆಗೆ 3025 ಎಂದು ಬರೆದಾಗ ಬಲಗಡೆ ಮೊದಲನೆಯ ಅಂಕೆಗೆ ತನ್ನ ಮೌಲ್ಯವಾದ ಮೂರರ ಜೊತೆಗೆ ಸ್ಥಾನ ಮೌಲ್ಯದಿಂದ ದೊರೆತ ಸಾವಿರ ಕೂಡ ದೊರೆತಿರುತ್ತದೆ. ಈ ಸಂಖ್ಯೆಯಲ್ಲಿ ಅದರ ನೈಜ ಮೌಲ್ಯವು ಮೂರು ಸಾವಿರ ಎಂಬುದು ಸ್ಪಷ್ಟವಾಗಿದೆ. ಇಂತಹ ಪದ್ದತಿಯನ್ನು ವೇದಗಳ ಕಾಲಕ್ಕೆ ಮುಂಚಿನಿಂದಲೇ ಬಳಸುತ್ತ ಬಂದಿದ್ದೇವೆ. ಆದರೆ ಪಾಶ್ಚಾತ್ಯ ಪ್ರಪಂಚದಲ್ಲಿ ಇದು ಪರಿಚಿತವಾಗಿರಲಿಲ್ಲ. ಅವರು ಅತ್ಯಂತ ಕಷ್ಟಪಟ್ಟು ಗಣಿತವನ್ನು ಕಲಿತು ಅದರ ಅಧ್ಯಯನವನ್ನು ಮುಂದುವರೆಸಬೇಕಾಗಿತ್ತು. ನಮ್ಮಲ್ಲಿನ ಅಧ್ಯಯನ ಪರಂಪರೆ ಮೌಖಿಕವಾಗಿದ್ದು ಅದರಲ್ಲಿ ಎಲ್ಲವೂ ಶ್ಲೀಕ ಅಥವಾ ಪದ್ಯಗಳ ಅಥವಾ ಸೂತ್ರಗಳ ರೂಪದಲ್ಲಿ ದಾಖಲಿತವಾಗಿವೆ. ಆ ಅಧ್ಯಯನ ಸ್ವರೂಪದಿಂದ ಇನ್ನಿಲ್ಲದ ಅನುಕೂಲಗಳೂ ದೊರೆತಿವೆ. ಹಾಗೆಯೇ ಸಾಕಷ್ಟು ಮಿತಿಗಳೂ ನಮ್ಮನ್ನು ಕಾಡಿವೆ.

ಸೂತ್ರರೂಪದಲ್ಲಿ ಇದ್ದದರಿಂದ ಅದು ಮೌಖಿಕ ಪರಂಪರೆಯಲ್ಲಿ ಯಥಾವತ್ತಾಗಿ ಉಳಿದು ಬಂದಿತು. ಹೀಗಾಗಿ ದೇಶದ ಉದ್ದಗಲಕ್ಕೂ ವೇದಗಳಂತಹ ಗ್ರಂಥಗಳ ಪಾಠ ಒಂದು ಬಗೆಯ ಏಕರೂಪತೆಯನ್ನು ಪಡೆದುಕೊಂಡಿದೆ ಎಂಬುದು ವಿದ್ವಾಂಸರ ಅಭಿಪ್ರಾಯ. ವೇದಗಳಲ್ಲಿ ಮೊದಲನೆಯದಾದ ಋಗ್ವೇದದಲ್ಲಿಯೇ ದಶ, ಶತ, ಸಹಸ್ರ ಮೊದಲಾದ ಸಂಖ್ಯೆಯ ಉಲ್ಲೇಖವಿದೆ ಎಂಬುದನ್ನು ಗಣಿತದ ಚರಿತ್ರಕಾರರು ಗುರುತಿಸಿದ್ದಾರೆ. ಅಲ್ಲದೆ ಶೂನ್ಯ ಅಥವಾ R ಎಂದು ಸೊನ್ನೆಯನ್ನು ಕರೆಯಲಾಗುತ್ತಿತ್ತು. ಶೂನ್ಯಕ್ಕೆ ಏನೂ ಇಲ್ಲ, ಖಾಲಿ ಜಾಗ ಎಂಬ ಅರ್ಥಗಳಿವೆ. ಆದರೆ ಪ್ರಾಚೀನ ಗಣಿತಜ್ಞರು ಇದನ್ನು ದಶಮಾನ ಪದ್ದತಿಯ ಒಂದು ಘಟಕವಾಗಿ ನೋಡಿ ಕರಾರುವಾಕ್ಕಾದ ಒಂದು ಪದ್ಧತಿಯನ್ನು ರೂಪಿಸಿಕೊಟ್ಟಿದ್ದಾರೆ.

ವೇದಗಳ ನಂತರ ಬಂದ ಬ್ರಾಹ್ಮಣಗಳಲ್ಲಿ ಆಗಲೇ ಹತ್ತು, ಇಪ್ಪತ್ತು, ಮುವ್ವತ್ತು, ನಲವತ್ತು, ಐವತ್ತು, ಅರವತ್ತು, ಎಪ್ಪತ್ತು ಎಂಬತ್ತು, ತೊಂಬತ್ತು ಮುಂತಾದ ನಿಷ್ಕೃಷ್ಟ ಪದಗಳನ್ನು ದಶ, ವಿಂಶತಿ, ತ್ರಿಂಶತಿ, ಚತುರ್ವಿಂಶತಿ, ಪಂಚವಿಂಶತಿ, ಅಷ್ಟಿತಿ ಮತ್ತು ನವತಿ ಏಂಬುದಾಗಿ ಕರೆದಿರುವುದು ತಿಳಿದು ಬರುತ್ತದೆ. ಅಲ್ಲದೆ ಋಗ್ವೇದದಲ್ಲಿ 720 ಎಂಬ ಸಂಖ್ಯೆಯನ್ನು ಸಪ್ತ ಶತಾನಿ ವಿಂಶತಿ ಎಂದು ದಾಖಲಿಸಿರುವುದನ್ನು ಕಾಣಬಹುದಾಗಿದೆ.

ಇನ್ನು ಸಂಖ್ಯಾಪದ್ದತಿಯ ಇನ್ನೊಂದು ಅಂಶದ ಕುರಿತು ನೋಡಬಹುದು. ನಮ್ಮಲ್ಲಿ ತುಂಬ ಹಿಂದಿನ ಅತಿದೊಡ್ಡ ಸಂಖ್ಯೆ ಯಾವುದು, ಅದನ್ನು ಏನೆಂದು ಕರೆಯುತ್ತಿದ್ದರು ಎಂಬುದರತ್ತ ನೋಡಿದಾಗ ಒಂದು ಕರ್ತೃವಿನ ಹೆಸರು ತಿಳಿದಯ ಒಂದು ಜೈನ ಕೃತಿಯಲ್ಲಿ ಈಗ ನಾವು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲ 1096 ಎಂಬ ಸಂಖ್ಯೆ ಕಾಣ ಸಿಗುತ್ತದೆ. ಇದನ್ನು ಅದರಲ್ಲಿ ದಶ ಅನಂತ ಎಂದು ಕರೆಯಲಾಗಿದೆ. ಈ ಸಂಖ್ಯೆಯ ಮೌಲ್ಯವನ್ನು ಕಣ್ಣ ಮುಂದೆ ತಂದುಕೊಳುವುದೂ ಅಷ್ಟೇನೂ ಸುಲಭದ ವಿಷಯವಲ್ಲ. ಪ್ರಯತ್ನಿಸಿ ನೋಡಬಹುದು.

ನಮಗೆಲ್ಲ ಗೂಗಲ್ ಪರಿಚಿತವಾದ ಸಾಧನವಾಗಿದೆ. ಅದು ಮೂಲದಲ್ಲಿ ಒಂದು ಸಂಖ್ಯೆಯನ್ನು ಸೂಚಿಸುವ ಪದ. ಅದು 1032 ಎಂಬ ಮೌಲ್ಯವನ್ನು ಸೂಚಿಸುತ್ತದೆ. ಪಾಶ್ಚಾತ್ಯರಲ್ಲಿ ಈಚೀಚೆಗೆ ಮಾತ್ರವೇ ಬಿಲಿಯನ್‌ನಿಂದ ದೊಡ್ಡ ಸಂಖ್ಯೆಗಳನ್ನು ನಿರೂಪಿಸಲಾರಂಭಿಸಿದ್ದು. ಪ್ರಸಿದ್ಧ ಬೌದ್ಧಗ್ರಂಥವಾದ ಲಲಿತ ವಿಸ್ತರದಲ್ಲಿಯೂ ಈ ಬಗೆಯ ಸಂಖ್ಯಾ ಪದ್ಧತಿಯ ಉಲ್ಲೇಖವಿದೆ. ಮಹಾಭಾರತದಲ್ಲಿಯೂ ಅರ್ಬುದ, ನಿರ್ಬುದಗಳಂತಹ ದೊಡ್ಡ ಸಂಖ್ಯೆಗಳ ನಿರೂಪಣೆ ಇದೆ. ಅವುಗಳಿಗೆ ನಿರ್ದಿಷ್ಟ ಹೆಸರುಗಳಿವೆ. ನಾವು ನಮ್ಮ ಪರಂಪರೆಯನ್ನು ಗೌರವಿಸಬೇಕು.

ನೆರವು: ಇಂಗ್ಲಿಷ್ ಲೇಖನ - Decimal system in India by Amartya Kumar Dutta
Encyclopaedia of the History of Science, Technology, and Medicine in Non-Western Cultures

# ಬರಲಿದೆ 'ಗ್ರಹಣ' ನೋಡಿದವನೇ ಜಾಣ

ಗೆಳೆಯರೆ, ನಮ್ಮ ಸುತ್ತಲಿನ ಭೌತಿಕ ಜಗತ್ತು ಅನೇಕ ವಿಸ್ಮಯಗಳ ತಾಣ. ನಮ್ಮ ಭೂಮಿ, ಆಕಾಶ, ಅಲ್ಲಿರುವ ಅಸಂಖ್ಯಾತ ನಕ್ಷತ್ರಗಳು ಗ್ರಹಗಳು ಒಟ್ಟಾರೆ ಇಡೀ ವಿಶ್ವವೇ ಅಗಾಧ ನಿಗೂಢಗಳ ಆಗರ! ರಾತ್ರಿ ತಲೆಯೆತ್ತಿ ನೋಡಿದರೆ ಆಕಾಶದಲ್ಲಿ ಮಿನುಗುವ ಸಹಸ್ರಾರು ನಕ್ಷತ್ರಗಳು ಅಸಂಖ್ಯಾತ ಪ್ರಶ್ನೆಗಳನ್ನು ನಿಮ್ಮಲ್ಲಿ ಹುಟ್ಟಿಸುತ್ತವೆ. ನಮ್ಮ ಪ್ರಾಚೀನ ಜನರನ್ನು ಹೀಗೆ ಕಾಡಿದ ಪ್ರಶ್ನೆಗಳೇ ಅನೇಕ ಅನ್ವೇಶಣೆಗಳಿಗೆ ನಾಂದಿಹಾಡಿದವು. ಭೂಮಿಯ ಮೇಲಿನಿಂದಲೇ ನಮ್ಮ ವಿಶ್ವದ ಬಗೆಗಿನ ಮನುಕುಲದ ಅನ್ವೇಶಣೆಯು ಜ್ಞಾನದ ಹೆಬ್ಬಾಗಿಲನ್ನೇ ತೆರೆದುಬಿಟ್ಟಿತು. ಅದರ ಲಾಭದಫಲವನ್ನು ಈ ಆಧುನಿಕ ಪೀಳಿಗೆಯಲ್ಲಿ ನಾವು ನೀವೆಲ್ಲರೂ ಅನುಭವಿಸುತ್ತಿದ್ದೇವೆ. ನಮ್ಮ ಭೂಮಿಯೂ ಸೇರಿದಂತೆ, ವಿಶ್ವದಲ್ಲಿರುವ ಸಕಲ ಚರಾಚರ ವಸ್ತುಗಳೆಲ್ಲವೂ ಹೇಗೆ ಹುಟ್ಟಿದವು? ಹೇಗೆ ಅಸ್ತಿತ್ವದಲ್ಲಿವೆ? ಅವುಗಳ ಹುಟ್ಟು ಸಾವು ಹೇಗೆ ಎಷ್ಟು ಎಂಬುದನ್ನೆಲ್ಲಾ ಕಂಡುಕೊಳ್ಳುವಲ್ಲಿ ಆಧುನಿಕ ಮನುಷ್ಯ ಹಲವು ಹೆಜ್ಜೆಗಳನ್ನಿಟ್ಟಿದ್ದಾನೆ. ಇಂತಹಾ ಜ್ಞಾನದಲ್ಲಿ ದಕ್ಕಿದ ಅನುಭವದಲ್ಲಿ ಆಕಾಶದಲ್ಲಿ ಕಾಣುವ ಚಂದ್ರನಲ್ಲಿಗೂ ಹೋಗಿ ಬಂದಿದ್ದಾನೆ. ನಮ್ಮ ಸೌರಮಂಡಲದ ಅಂಚಿಗೂ ತಾನು ನಿರ್ಮಿಸಿದ ವಾಹನಗಳನ್ನು ಕಳುಹಿಸಿದ್ದಾನೆ. ಇದಕ್ಕಾಗಿ ಖಗೋಳ ವಿಜ್ಞಾನವೆಂಬ ಜ್ಞಾನ ಶಾಖೆಯನ್ನೇ ಸೃಷ್ಟಿಸಿದ್ದಾನೆ. ಇಷ್ಟಾದರೂ, ಪ್ರಕೃತಿಯಲ್ಲಿನ ವಿದ್ಯಾಮಾನಗಳ ಬಗೆಗೆ ಬಹಳಷ್ಟು ಜನರಲ್ಲಿ ಇಂದಿಗೂ ಭಯ ಆತಂಕಗಳು ದೂರವಾಗಿಲ್ಲ. ಪ್ರಕೃತಿಯಲ್ಲಿ ನಡೆಯುವ ಘಟನೆಗಳು ಕೆಡುತ್ತಿರುತ್ತವೆ ಎಂದೇ ಅನೇಕರು ನಂಬುತ್ತಾರೆ. ಆದರೆ, ಇಂತಹಾ ಘಟನೆಗಳ ಅಧ್ಯಯನಗಳಿಂದಲೇ ಆಧುನಿಕ ಮನುಷ್ಯನ ನಾಗರೀಕತೆ ರೂಪುಗೊಂಡಿತೆಂಬುದನ್ನು ಬಹಳಷ್ಟು ಜನ ಮರೆಯುತ್ತಾರೆ. ಇಂದಿಗೂ ನಮ್ಮ ಸಮಾಜದಲ್ಲಿ 'ಗ್ರಹಣ' ನಡೆದಾಗ ಹಲವರು ಹುಸಿ ಭ್ರಾಂತಿಗೆ, ಭಯಭೀತಿಗೆ ಒಳಗಾಗುತ್ತಾರೆ. ಆಹಾರ ಕೆಡುತ್ತದೆಂದೂ, ನೀರು ವಿಷವಾಗುತ್ತದೆಂದೂ, ಆ ಸಂದರ್ಭದಲ್ಲಿ ಸೂರ್ಯನಿಂದ ವಿಶೇಷ ಕಿರಣಗಳು ಬಿಡುಗಡೆಯಾಗುತ್ತವೆ ಎಂದು ನಂಬುವವರಿದ್ದಾರೆ. ವಾಸ್ತವದಲ್ಲಿ ನಮ್ಮ ಭೂಮಿಗೆ ಸಂಬಂಧಿಸಿ, ಸೂರ್ಯ ಭೂಮಿ ಚಂದ್ರರು ಒಂದೇ ಸರಳ ರೇಖೆಯಲ್ಲಿ ಬಂದಾಗ ಭೂಮಿಯ ಮೇಲಿನ ನಮಗೆ ಸೂರ್ಯ ಮರೆಯಾಗಿಯೋ, ಚಂದ್ರನ ಮೇಲೆ ಭೂಮಿಯ ನೆರಳು ಬಿದ್ದು ಕಾಣುವ ಅಪರೂಪದ ಸನ್ನಿವೇಶವನ್ನು 'ಗ್ರಹಣ'ವೆಂದು ಕರೆಯಲಾಗುತ್ತದೆ. ಇದೊಂದು ಬೆಳಕು ನೆರಳಿನಾಟವಷ್ಟೆ. ಇನ್ನು ಗ್ರಹಣದ ಬಗೆಗೆ ನಮ್ಮ ಸಮಾಜದಲ್ಲಿ ಮನೆಮಾಡಿರುವ ಇಂಥಾ ನಂಬಿಕೆಗಳು ಕೇವಲ ನಂಬಿಕೆಗಳಷ್ಟೇ ಹೊರತು ಅವುಗಳಿಗೆ ಯಾವುದೇ ವೈಜ್ಞಾನಿಕ ಆಧಾರಗಳಿಲ್ಲ.

ಸೂರ್ಯಗ್ರಹಣ ನಮ್ಮ ಸೌರಮಂಡಲದ ಒಂದು ಅಪರೂಪದ ಘಟನೆ. ಗ್ರಹಣ ನಡೆದಾಗ ಆ ಆಕಾಶ ವಿಸ್ಮಯವನ್ನು, ಪ್ರಕೃತಿಯ ಆ ಬೆರಗನ್ನು ನೋಡುವುದೇ ನಿಮ್ಮ ಜೀವನದ ಒಂದು ಆನಂದದ ಕ್ಷಣವಾಗಬಲ್ಲದು! ಏಕೆಂದರೆ ಗ್ರಹಣ ನಡೆಯುವುದು ಬಹಳ ಅಪರೂಪ. ಕೆಲವು ಗ್ರಹಣಗಳನ್ನು ನಮ್ಮ ಜೀವಮಾನದಲ್ಲಿ ಒಮ್ಮೆ ಮಾತ್ರ ನೋಡಲುಸಾಧ್ಯ. ಗ್ರಹಣಗಳನ್ನು ಸುರಕ್ಷಿತವಾಗಿ ನೋಡಬೇಕೆಂದು ವಿಜ್ಞಾನಿಗಳೂ ಹೇಳುತ್ತಾರೆ. ಕಾರಣ, ಪ್ರಖರವಾದ ಸೂರ್ಯನನ್ನು ಬರಿಗಣ್ಣಿನಲ್ಲಿ ನೋಡುವುದು ಅಪಾಯವೇ. ಸಂಪೂರ್ಣ ಸೂರ್ಯಗ್ರಹಣವಾದಂತಸಮಯದಲ್ಲಿ, ಎರಡು ಮೂರು ನಿಮಿಷ ಮಾತ್ರ ಕಗ್ಗತ್ತಲು ಆವರಿಸಿ ದಿಢೀರನೆ ಸೂರ್ಯನಬೆಳಕು ಹೊರಸೂಸುವಕಾರಣ ನಮ್ಮ ಕಣ್ಣಿನ ರೆಟಿನಾಗೆ ತೊಂದರೆ ಆದೀತೆಂಬ ಸಣ್ಣ ಎಚ್ಚರಿಕೆಯಷ್ಟೇ. ಇದಕ್ಕಾಗಿಯೇ ಹಲವು ವೈಜ್ಞಾನಿಕ ಸಂಸ್ಥೆಗಳು ಸುರಕ್ಷಿತ ಗ್ರಹಣ ವೀಕ್ಷಣೆಗಾಗಿ 'ಸೋಲಾರ್ ಫಿಲ್ಟರ್ ಕನ್ನಡಕ'ಗಳನ್ನು ತಯಾರಿಸಿ ಹತ್ತು, ಹದಿನೈದು ರೂಪಾಯಿಯಷ್ಟು ಸುಲಭಬೆಲೆಗೆ ದೇಶದಾದ್ಯಂತ ವಿತರಿಸುತ್ತಿದ್ದಾರೆ. ಇಂತಹಾ ಒಂದು ಕನ್ನಡಕವಿದ್ದರೆ ನೂರಾರು ಜನ ಗ್ರಹಣ ವೀಕ್ಷಣೆ ಮಾಡಬಹುದು. ಇಂತಹಾ ಕನ್ನಡಕ ನಿಮಗೇ ಸಿಗದೇ ಇದ್ದರೂ ನಿರಾಸೆ ಪಡಬೇಕಾಗಿಲ್ಲ. ಗ್ರಹಣದ ದಿನ ನಿಮ್ಮ ಮನೆಯಲ್ಲಿರುವ ಒಂದು ಪುಟ್ಟ ಕನ್ನಡಿಯಿಂದ (ಕನ್ನಡಿಯ ಚೂರಾದರೂ ಆದೀತು), ನಿಮ್ಮ ಕೋಣೆಯೊಳಗೆ ಗೋಡೆಯ ಮೇಲೆ ಬೆಳಕಿನ ಪ್ರತಿಫಲನ ಮೂಡಿಸಿದರೆ, ಚಂದ್ರ ಸೂರ್ಯನನ್ನು ಹಾದು ಹೋಗುವ ದೊಡ್ಡದಾದ ಚಿತ್ರವನ್ನು ನೀವು ನೋಡಬಹುದು. ನಿಮ್ಮ ಮನೆಮಂದಿಗೆಲ್ಲಾ ತೋರಿಸಬಹುದು. ಗ್ರಹಣ ಯಾವಾಗ ಎಂದಿರಾ? ಇದೇ ಡಿಸೆಂಬರ್ 26, 2019ರಂದು ಗುರುವಾರ 'ಕಂಕಣ ಸೂರ್ಯಗ್ರಹಣ' ನಡೆಯಲಿದೆ. ಬೆಳಗ್ಗೆ 8.30ಕ್ಕೆ ಪ್ರಾರಂಭವಾಗಿ 11 ಗಂಟೆಗೆ ಮುಕ್ತಾಯವಾಗಲಿದೆ. ತಪ್ಪದೇ ಈ ಅಪರೂಪದ ಖಗೋಳ ವಿಸ್ಮಯವನ್ನು ನೀವೂ ನೋಡಿ ಆನಂದಿಸಿರಿ. ನಿಮ್ಮ ಮನೆಯವರೆಲ್ಲರಿಗೂ ತೋರಿಸಿರಿ.




- ಚಳ್ಳಕೆರೆ ಯರ್ರಿಸ್ವಾಮಿ

# • ಶ್ರದ್ಧಾಂಜಲಿ •



ರಾಜ್ಯ ಗೈಡ್ ವಿಭಾಗದ ತರಬೇತಿ ಆಯುಕ್ತರಾಗಿ ನಿವೃತ್ತರಾಗಿದ್ದ **ಶ್ರೀಮತಿ ಕೆ.ಕೆ. ಲೀಲಾ ಅವರು** ದಿನಾಂಕ 28 ಅಕ್ಟೋಬರ್ 2019 ರಂದು ದಕ್ಷಿಣ ಕನ್ನಡ ಜಿಲ್ಲೆಯ ಸೂಳ್ಯ ಸಮೀಪದ ಸ್ವಗೃಹದಲ್ಲಿ ನಿಧನ ಹೊಂದಿದರು.

ಇವರು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ 22 ವರ್ಷಗಳು ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾಗಿ, ಬೀದರ್, ಕಲಬುರ್ಗಿ, ಬಳ್ಳಾರಿ, ದಾವಣಗೆರೆ, ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಕೊಡಗು ಮತ್ತು ಬೆಂಗಳೂರು ಉತ್ತರ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸಿ, ನಂತರ 8 ವರ್ಷಗಳು ರಾಜ್ಯ ಸಂಸ್ಥೆಯಲ್ಲಿ ಗೈಡ್ ವಿಭಾಗದ ರಾಜ್ಯ ತರಬೇತಿ ಆಯುಕ್ತರಾಗಿ ಕಾರ್ಯನಿರ್ವಹಿಸಿ ನಿವೃತ್ತಿ ಹೊಂದಿದ್ದರು.

ಇವರು ತಮ್ಮ ಮಗಳು ಕು॥ ಶ್ರೇಯ ಹಾಗೂ ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ. ಅವರ ಆತ್ಮಕ್ಕೆ ಶಾಂತಿ ನೀಡಲು ಹಾಗೂ ಅವರ ಕುಟುಂಬದವರಿಗೆ, ಬಂಧು ಮಿತ್ರರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ



**ಶ್ರೀಮತಿ ನಿರ್ಮಲ ಬಸವರಾಜ್**, ಮಾಜಿ ಜಿಲ್ಲಾ ಜಂಟಿ ಕಾರ್ಯದರ್ಶಿ, ಶಿವಮೊಗ್ಗ ಜಿಲ್ಲೆ ಇವರು ದಿನಾಂಕ 31-10-2019 ರಂದು ಶಿವಮೊಗ್ಗದಲ್ಲಿ ನಿಧನಹೊಂದಿದರು. ಶಿವಮೊಗ್ಗ ಜಿಲ್ಲಾ ಸಂಸ್ಥೆಯಲ್ಲಿ 6 ವರ್ಷಗಳಕಾಲ ಜಂಟಿ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದರು.

ಇವರು ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ. ಅವರ ಆತ್ಮಕ್ಕೆ ಶಾಂತಿ ನೀಡಲು ಹಾಗೂ ಅವರ ಕುಟುಂಬದವರಿಗೆ, ಬಂಧು ಮಿತ್ರರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ

## ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ವಿವಿಧ ಜಿಲ್ಲೆಗಳಲ್ಲಿ ಜರುಗಿದ ಧ್ವಜಚೀಟಿ ಬಿಡುಗಡೆ ಕಾರ್ಯಕ್ರಮಗಳು


















# ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ವಿವಿಧ ಜಿಲ್ಲೆಗಳಲ್ಲಿ ಜರುಗಿದ ಧ್ವಜಚೀಟಿ ಬಿಡುಗಡೆ ಕಾರ್ಯಕ್ರಮಗಳು


ಚಿಕ್ಕಬಳ್ಳಾಪುರ


ಚಿಕ್ಕಮಗಳೂರು


ದಕ್ಷಿಣ ಕನ್ನಡ


ಹಾಸನ


ಕಾರವಾರ


ಕೊಡಗು


ಕೋಲಾರ


ಕೊಪ್ಪಳ


ಮಧುಗಿರಿ


ಮಂಡ್ಯ



ಮೈಸೂರು


ರಾಯಚೂರು


ರಾಮನಗರ


ಶಿವಮೊಗ್ಗ



ಶಿರಸಿ


ಉಡುಪಿ


ವಿಜಯಪುರ


ಯಾದಗಿರಿ



# ನಿಸರ್ಗದೊಂದಿಗೆ ಸಹಬಾಳ್ವೆಗೆ ಪ್ರೋತ್ಸಾಹಿಸೋಣ

- ನೈಸರ್ಗಿಕ ಸಂಪನ್ಮೂಲಗಳನ್ನು ಮಿತವಾಗಿ ಬಳಸೋಣ
- ಮಳೆನೀರು ಕೊಯ್ಲು, ಅಂತರ್ಜಲ ಮರುಪೂರ್ಣ ಮಾಡೋಣ
- ಕೆರೆ, ಕುಂಟೆ, ಜಲಸಂಪನ್ಮೂಲಗಳನ್ನು ಸಂರಕ್ಷಿಸೋಣ
- ಮರಗಿಡಗಳನ್ನು ಬೆಳೆಸಿ ಸಂರಕ್ಷಿಸೋಣ
- ಸೌರಶಕ್ತಿ, ಪವನ ಹಾಗೂ ಇತರೆ ನವೀಕರಿಸಬಹುದಾದ ಸಂಪನ್ಮೂಲಗಳನ್ನು ಪ್ರೋತ್ಸಾಹಿಸೋಣ
- ಕಸವಿಂಗಡಣೆ ಮಾಡೋಣ ಹಾಗೂ ತ್ಯಾಜ್ಯ ಉತ್ಪಾದನೆ ಕಡಿಮೆಗೊಳಿಸಲು ಕ್ರಮವಹಿಸೋಣ
- ಪ್ಲಾಸ್ಟಿಕ್ ಬಳಕೆ ತ್ಯಜಿಸೋಣ
- ನಮ್ಮ ವಾಹನಗಳ ಹೊಗೆ ಪ್ರಮಾಣ ಮಿತಿಯಲ್ಲಿಡಲು ಕ್ರಮವಹಿಸೋಣ
- ಹಬ್ಬಗಳನ್ನು ಪರಿಸರ ಸ್ನೇಹಿಯಾಗಿ ಆಚರಿಸೋಣ
- ಕಾರ್ ಪೂಲಿಂಗ್, ಸಾರ್ವಜನಿಕ ಸಾರಿಗೆ ಹೆಚ್ಚಾಗಿ ಬಳಸುವ ಮೂಲಕ ವಾಯುಮಾಲಿನ್ಯ ನಿಯಂತ್ರಣಕ್ಕೆ ಸಹಕರಿಸೋಣ

**ನಮ್ಮೆಲ್ಲರ ಚಿತ್ತ
ನೈಸರ್ಗಿಕ ಸಂಪನ್ಮೂಲಗಳ
ಮಿತ ಬಳಕೆಯತ್ತವಿರಲಿ**



ಸಾರ್ವಜನಿಕರ ಹಿತಾಸಕ್ತಿಯಿಂದ ಪ್ರಕಟಿತ

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

#49, ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು - 560 001 ದೂ: 080-2558 6520 / 2558 9112 / 2558 8142 ಫ್ಯಾಕ್ಸ್: 080-2558 6321
ಇಮೇಲ್ : ho@kspcb.gov.in ವೆಬ್‌ಸೈಟ್ : www.kspcb.gov.in




ನವೆಂಬರ್ 2 ರಿಂದ 3ರ ವರೆಗೆ ಮೈಸೂರಿನಲ್ಲಿ ನಡೆದ ರಾಜ್ಯ ಮಟ್ಟದ 'ಗೀತ ಗಾಯನ ಸ್ಪರ್ಧೆ'ಯ ಸಮಾರೋಪ ಸಮಾರಂಭದಲ್ಲಿ ಸುತ್ತೂರು ಮಠಾಧ್ಯಕ್ಷರಾದ ಪೂಜ್ಯ ಶ್ರೀಶ್ರೀಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ವಿಜೇತ ಸ್ಕೌಟ್ಸ್-ಗೈಡ್ಸ್‌ಗಳಿಗೆ ಬಹುಮಾನ ಹಾಗು ಪ್ರಶಸ್ತಿ ಪತ್ರಗಳನ್ನು ವಿತರಿಸಿ ಆಶೀರ್ವಚನ ನೀಡಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಮಾನ್ಯ ಶಾಸಕರಾದ ಶ್ರೀ ಎಲ್. ನಾಗೇಂದ್ರ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಪಿ. ವಿಶ್ವನಾಥ್ ಹಾಗು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಕರ್ನಾಟಕ ಸರ್ಕಾರದ ಹಣಕಾಸು ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಐ.ಎಸ್.ಎನ್. ಪ್ರಸಾದ್ ಹಣಕಾಸು ಇಲಾಖೆಯ ಕಾರ್ಯದರ್ಶಿಗಳಾದ ಡಾ. ಪಿ.ಸಿ. ಜಾಫರ್ ಮತ್ತು ಸರ್ವಶಿಕ್ಷಣ ಅಭಿಯಾನದ ರಾಜ್ಯ ಸಂಯೋಜನಾಧಿಕಾರಿಗಳಾದ ಡಾ. ಟಿ.ಎಂ. ರೇಜು ಅವರುಗಳು ತಮ್ಮ ಕಛೇರಿಯಲ್ಲಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು.




ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಅನಿರುಧ್ ಶ್ರವಣ್ ಅವರು ತಮ್ಮ ಕಛೇರಿಯಲ್ಲಿ ಧ್ವಜಚೀಟಿಗಳನ್ನು ಬಿಡುಗಡೆಗೊಳಿಸಿದರು. ಶ್ರೀಮತಿ ಗೀತಾನಟರಾಜ್, ಶ್ರೀ ಡಿ. ವೆಂಕಟೇಶ್ ಶ್ರೀಮತಿ ರಾಧಾ ವೆಂಕಟೇಶ್ ಶ್ರೀ ಎಲ್.ಟಿ. ಲೋಕೇಶ್ ಹಾಗು ಸ್ಕೌಟ್-ಗೈಡ್ ಚಿತ್ರದಲ್ಲಿದ್ದಾರೆ.



ಫೆಡರೇಶನ್ ಆಫ್ ಕರ್ನಾಟಕ ಚೇಂಬರ್ಸ್ ಆಫ್ ಕಾಮರ್ಸ್ & ಇಂಡಸ್ಟ್ರಿ ಅಧ್ಯಕ್ಷರಾದ ಶ್ರೀ ಸಿ.ಆರ್. ಜನಾರ್ಧನ್ ಹಾಗು ಮಹಿಳಾ ಘಟಕಗಳ ಸಂಚಾಲಕರಾದ ಶ್ರೀಮತಿ ಯಶೋಧ ಯಾದವ್ ಅವರುಗಳು ಅವರ ಕಛೇರಿಯಲ್ಲಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು.



ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಕೆ. ಜಿ. ಜಗದೀಶ್ ಅವರು ತಮ್ಮ ಕಛೇರಿಯಲ್ಲಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು. ಶ್ರೀ ಕೆ. ಗಂಗಪ್ಪ ಗೌಡ, ಶ್ರೀ ಬಿ.ಕೆ. ಬಸವರಾಜ ಶ್ರೀಮತಿ ಬಿ.ವಿ. ರಾಮಲತಾ ಹಾಗು ಸ್ಕೌಟ್ ಚಿತ್ರದಲ್ಲಿದ್ದಾರೆ

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 52)





If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

Published by : The Bharat Scouts & Guides, Karnataka, State Headquarters
Shanthi Gruha #39, Palace Road, Bengaluru - 560 001. Publisher & Editor : K. Gangappa Gowda, Printed by : L. Lingappa
M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru 26